# ರತ್ನ ರಹಸ್ಯ

ನಿಮ್ಮ ಅದೃಷ್ಟ, ಭಾಗ್ಯ, ಐಶ್ವರ್ಯ, ವಿವಾಹ, ವಿದ್ಯೆ, ಆರೋಗ್ಯ ವೃದ್ಧಿಯಾಗಲು ಶುಭರತ್ನ ಯಾವುದೆಂದು ಜಾತಕ, ಹಸ್ತರೇಖೆ ಅಥವ ಹೆಸರಿನಿಂದ ತಿಳಿಸಲು ಸಾಧ್ಯ. ವೈಜ್ಞಾನಿಕವಾಗಿ ಮಾನವ ಶರೀರಕ್ಕೂ ಶುಭಾಶುಭ ರತ್ನ - ಉಪರತ್ನಗಳಿಗೂ ಸಂಬಂಧವನ್ನು ನಿರೂಪಿಸುವ ಪ್ರಥಮ ಯತ್ನ.

| | | | |
|---|---|---|---|
| 12 ಮೀನ | 1 ಮೇಷ | 2 ವೃಷಭ | 3 ಮಿಥುನ |
| 11 ಕುಂಭ | | | 4 ಕಟಕ |
| 10 ಮಕರ | ರಾಶಿ | ಚಕ್ರ | 5 ಸಿಂಹ |
| ಧನು 9 | ವೃಶ್ಚಿಕ 8 | ತುಲ 7 | ಕನ್ಯ 6 |


ಲೇಖಕರು :

ಕೆ. ನಾಗರಾಜ ರಾವ್

ನಿರ್ದೇಶಕರು:

ಸಾರಸ್ವತ ಮಹಾವಿಶ್ವವಿದ್ಯಾಲಯದ ಜ್ಯೋತಿಷ ವಿಭಾಗ

ನಂ. 1083, 27ನೇ ಮೈನ್, ಜಯನಗರ 9ನೇ ಬ್ಲಾಕ್, ಬೆಂಗಳೂರು - 69

# ರತ್ನರಹಸ್ಯ

ನಿಮ್ಮ ಅದೃಷ್ಟ ರತ್ನ, ಭಾಗ್ಯ ರತ್ನ, ರೋಗನಿವಾರಕ ರತ್ನ
ಯಾವುದೆಂದು ತಿಳಿಸುವ ಕನ್ನಡದ ಪ್ರಪ್ರಥಮ ಗ್ರಂಥ
'ಪ್ರಜಾವಮತ'ದಲ್ಲಿ ಪ್ರಕಟವಾದ ಲೇಖನಗಳ ವಿಸ್ತಾರ ರೂಪ


ಜ್ಯೋತಿರ್ವಿದ್ಯಾ ವಿಶಾರದ, ಜ್ಯೋತಿಷ ವಾಚಸ್ಪತಿ, ಜ್ಯೋತಿಷ ಶಿರೋಮಣಿ
ಸಾಮುದ್ರಿಕಾಶಾಸ್ತ್ರ ಪ್ರವೀಣ, ಸಂಖ್ಯಾಶಾಸ್ತ್ರ ಪ್ರವೀಣ

**ಕೆ. ನಾಗರಾಜ ರಾವ್**

ನಿರ್ದೇಶಕರು : ಸಾರಸ್ವತ ಮಹಾ ವಿಶ್ವವಿದ್ಯಾಲಯದ ಜ್ಯೋತಿಷ ವಿಭಾಗ


ಗ್ರಂಥಕರ್ತರು :
ಅಂಕಗಳಲ್ಲಿ ಅದೃಷ್ಟ, ನಿತ್ಯೋಪಯುಕ್ತ ದೇವತಾ ಸ್ತೋತ್ರಗಳು, ಪವಿತ್ರ ತುಳಸಿ, ನಕ್ಷತ್ರ ಜಾತಕ, ಐಶ್ವರ್ಯ ದೇವತೆ ಮಹಾಲಕ್ಷ್ಮಿ, ಸ್ವಯಂ ಭವಿಷ್ಯ ದರ್ಶಿನಿ, ಹಸ್ತದಲ್ಲಿ ಹಣೆ ಬರಹ, ಅಸ್ಟ್ರಾಲಜಿ ಫಾರ್ ಯು, ಫೈಂಡ್ ಯುವರ್ ಲಗ್ನ ಇನ್ ಎ ಮಿನಿಟ್, ವಿವಾಹ ದಾಂಪತ್ಯ ಜೀವನ ಸಂತಾನಕ್ಕೆ 12 ಕೂಟಗಳ ಮಹತ್ವ ಇತ್ಯಾದಿ.


ಪ್ರಕಾಶಕರು :
**ರಾಜ್ಸ್ ಅಸ್ಟ್ರೋ ರಿಸರ್ಚ್ ಸೆಂಟರ್**
ನಂ. 200, ಮಾರ್ಕೆಟ್ ರಸ್ತೆ, (ವಿ.ಬಿ. ಬೇಕರಿ ಸಮೀಪ), ವಿಶ್ವೇಶ್ವರಪುರಂ
ಬೆಂಗಳೂರು – 560 004 ದೂರವಾಣಿ : 645489

**RATNA RAHASYA – By. K. Nagaraja Rao**
Deals with secrets of Precious Stones their Astrological Influence, Chemical composition and Medicinal properties ; selection of Gems for Luck, fortune, Prosperity and Health.
Published by **N. Keerthi Raj** for **Raj's Astro Research Centre,** 200, Market **Road,** V. V. Puram, Bangalore–560 004

ಪ್ರಥಮ ಮುದ್ರಣ : 1984



ಬೆಲೆ : ಇಪ್ಪತ್ತು ರೂಪಾಯಿಗಳು (**Rs. 20-00**)

ಪ್ರತಿಗಳು ದೊರೆಯುವ ಸ್ಥಳ :

★ **ಟಿ. ಎಸ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್**
235, ಚಿಕ್ಕಪೇಟೆ, ಬೆಂಗಳೂರು – 53

★ **ಗೀತಾ ಏಜೆನ್ಸೀಸ್**
ಬಳೇಪೇಟೆ ಚೌಕ, ಬೆಂಗಳೂರು – 53

★ **ವೇದಾಂತ ಭವನ**
ಚಾಮರಾಜಪೇಟೆ (ಉಮಾ ಟಾಕೀಸ್ ಸಮೀಪ), ಬೆಂಗಳೂರು – 18

★ **ಸಪ್ನ ಬುಕ್ ಹೌಸ್**
ಗಾಂಧಿನಗರ, ಬೆಂಗಳೂರು – 9

★ **ಗೀತಾ ಬುಕ್ ಹೌಸ್**
ಕೆ. ಆರ್. ಸರ್ಕಲ್, ಮೈಸೂರು

★ **ಸಮಾಜ ಪುಸ್ತಕಾಲಯ**
ಶಿವಾಜಿ ಬೀದಿ, ಧಾರವಾಡ – 1

★ **ಸಾಹಿತ್ಯ ಭಂಡಾರ**
ಹುಬ್ಬಳ್ಳಿ

★ **ಸಾಹಿತ್ಯ ಕೇಂದ್ರ**
ಮಂಗಳೂರು

★ ಮತ್ತು ಇತರ ಪ್ರಮುಖ ಪುಸ್ತಕ ವ್ಯಾಪಾರಿಗಳಲ್ಲಿ ಹಾಗೂ ನಮ್ಮ ಕೇಂದ್ರದಲ್ಲಿ ಸಹ ದೊರೆಯುತ್ತವೆ.

ಮುದ್ರಣ : **ಶ್ರೀ ರಂಗನಾಥ ಪ್ರಿಂಟರ್ಸ್**
825, ಹನುಮಂತನಗರ, ಬೆಂಗಳೂರು – 19

# " ಶ್ರೀರಕ್ಷೆ "

**H. H. Sri Vishweshathirtha Swamiji**
Sri Pejavara Mutt
Jagadguru Madhwacharya Samsthana
Udipi – 576 101, South Kanara
Phone : 8 4 9 8 BANGALORE

ನಮ್ಮ ಸಾರಸ್ವತ ಮಹಾವಿಶ್ವವಿದ್ಯಾಲಯದ ಜ್ಯೋತಿಷ್ಯ ಕುಂಜದ ಪ್ರಧಾನ ನಿರ್ದೇಶಕರಾದ ಕೆ. ನಾಗರಾಜರಾಯರು ಬರೆದ "ರತ್ನರಹಸ್ಯ" ಎಂಬ ಪುಸ್ತಕವು ನಮ್ಮ ಪ್ರಾಚೀನ ಪರಂಪರೆಯಲ್ಲಿ ಬಂದಿರುವ ರತ್ನಧಾರಣೆಗೆ ಸಂಬಂಧಿಸಿದ ಸಂಗತಿಗಳನ್ನು ವೈಜ್ಞಾನಿಕವಾಗಿ ವಿವರಿಸಿದೆ. ಇಂತಹ ಸಂಶೋಧನಾತ್ಮಕ ಮತ್ತು ಉಪಯುಕ್ತವಾದ ಪುಸ್ತಕವನ್ನು ಬರೆದಿರುವ ಬಗ್ಗೆ ಶ್ರೀ ನಾಗರಾಜರಾಯರನ್ನು ನಾವು ಅಭಿನಂದಿಸುತ್ತೇವೆ.

ಅದರಂತೆ ನಾಗರಾಜರಾಯರು "ಅಂಕಗಳಲ್ಲಿ ಅದೃಷ್ಟ" ಎಂಬ ಪುಸ್ತಕವನ್ನು ಬರೆದು ಅನೇಕ ಹೊಸ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. ಸಾರಸ್ವತ ಮಹಾ ವಿಶ್ವವಿದ್ಯಾಲಯದ ಜ್ಯೋತಿಷ್ಯ ಕುಂಜದ ನಿರ್ದೇಶಕರಾದ ಅವರ ಲೇಖನಿಯಿಂದ ಉತ್ತಮ ಪುಸ್ತಕಗಳು ಹೊರಬಂದು ಆರ್ಷವಿಚಾರಗಳ ಪ್ರಚಾರಕ್ಕೆ ಸಹಾಯವಾಗಲಿ ಎಂದು ಆಶಿಸುತ್ತೇವೆ.

ಇತಿ ಸಪ್ರೇಮ ನಾರಾಯಣ ಸ್ಮರಣೆಗಳು
(ಸಹಿ/–)
**ವಿಶ್ವೇಶ ತೀರ್ಥಶ್ರೀಃ**
ಕುಲಪತಿಗಳು
ಸಾರಸ್ವತ ಮಹಾ ವಿಶ್ವವಿದ್ಯಾಲಯ (ಟ್ರಸ್ಟ್)
ಬೆಂಗಳೂರು – 560 004

# ಪೀಠಿಕೆ

## ಶ್ರೀಮತಿ ರಾಜೇಶ್ವರಿ ರಾಮನ್ ರವರಿಂದ

(ನಿರ್ದೇಶಕಿ : ಸೂರ್ಯಪ್ರಕಾಶ್ ಯೋಗ ಸಂಸ್ಥೆ, ಬೆಂಗಳೂರು–20)

ಶ್ರೀ ಕೆ. ನಾಗರಾಜರಾಯರು ಬರೆದಿರುವ "ರತ್ನರಹಸ್ಯ" ಗ್ರಂಥವನ್ನು ನಾನು ವಿಶೇಷಾಸಕ್ತಿಯಿಂದ ಪರಿಶೀಲಿಸಿದ್ದೇನೆ. ರತ್ನಗಳನ್ನು, ಪ್ರಶಸ್ತವಾದ ಹರಳುಗಳನ್ನು, ಗ್ರಹಗತಿಗಳ ಕೆಟ್ಟ ಪರಿಣಾಮಗಳನ್ನು ನಿವಾರಿಸುವ ಕವಚಗಳಿಗೆ ಮಾತ್ರವಲ್ಲದೆ ಆಭರಣಗಳಿಗೂ ಉಪಯೋಗಿಸುತ್ತಾರೆಂಬುದು ಸಮಸ್ತರಿಗೂ ತಿಳಿದ ವಿಷಯವಷ್ಟೆ. ರತ್ನಗಳನ್ನು ಬಳಸುವುದರ ಹಿನ್ನೆಲೆ ಭಾವನೆಗಳನ್ನು ಪರಿಶೀಲಿಸಿದರೆ ಅವುಗಳ ಸಹಜ ಗುಣಲಕ್ಷಣಗಳ ಅವುಗಳ ಅರಿವೋ ಅಥವ ಅವುಗಳ ಸಾಂಕೇತಿಕ ಮಹತ್ವಗಳನ್ನು ಜನರು ಸಹಜವಾಗಿ ಮೆಚ್ಚಿಕೊಂಡಿದ್ದಾರೆಂಬುದೋ ರೂಢ ಮೂಲವಾಗಿರುವುದು ವ್ಯಕ್ತಪಡುತ್ತದೆ.

"ರತ್ನರಹಸ್ಯ" ಎಂಬ ತಮ್ಮ ಪುಸ್ತಕದಲ್ಲಿ ಶ್ರೀ ಕೆ. ನಾಗರಾಜರಾಯರು ಚರಿತ್ರೆಯಲ್ಲೂ, ಪುರಾಣಕತೆಗಳಲ್ಲೂ ರತ್ನಗಳು ವಹಿಸಿರುವ ಪಾತ್ರವನ್ನು ಸಂಕ್ಷೇಪವಾಗಿ ಹೊರಹೊಮ್ಮಿಸಿದ್ದಾರೆ. ವರಾಹಮಿಹಿರಾಚಾರ್ಯನು ರತ್ನಗಳೇ ಮುಂತಾದ ಮಣಿಗಳಿಗೆ ನೀಡಿರುವ ಪ್ರಾಮುಖ್ಯವನ್ನೂ ಅವುಗಳ ರಾಸಾಯನಿಕ ರಚನೆಯನ್ನೂ ಪುಸ್ತಕದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. "ಮಣಿಗಳಿಂದ ರೋಗ ನಿವಾರಣೆ" ಎಂಬ ಪರಿಚ್ಛೇದವು ಪ್ರಾಯೋಗಿಕ ಪ್ರಯೋಜನವುಳ್ಳದ್ದು, ವಿವಿಧ ರಾಶಿಗಳಲ್ಲಿ ಜನಿಸಿದವರು ಮಣಿಗಳನ್ನು ಬಳಸಬೇಕಾದ ವಿಧಾನ, ಜನ್ಮಕಾಲವನ್ನು ತಿಳಿಯದವರು ತಮ್ಮ ನಾಮ ನಕ್ಷತ್ರಕ್ಕೆ ಅನುಗುಣವಾಗಿ ಮಣಿಗಳನ್ನು ಆರಿಸಿಕೊಳ್ಳಬಹುದಾದ ವಿಧಾನ, ನವರತ್ನಗಳ ಉಂಗುರಕ್ಕೆ ವಿವಿಧವಾದ ಮಣಿಗಳನ್ನು ಆರಿಸಿಕೊಳ್ಳುವ ಬಗೆ ಇವನ್ನೆಲ್ಲಾ ಸ್ಪಷ್ಟವಾಗಿ ವಿವರಿಸಿದ್ದಾರೆ, ವ್ಯಾಸಮಹರ್ಷಿಯ ಪ್ರಕಾರ ಸ್ವಪ್ನಗಳಲ್ಲಿ ಕಾಣಬರುವ ವಿವಿಧ ಮಣಿಗಳ ಪರಿಣಾಮ ಏನು ಎಂಬುದನ್ನು ಕುರಿತ ಪರಿಚ್ಛೇದವು ತುಂಬ ಉಪಯುಕ್ತವಾದುದು.

ಶ್ರೀ ನಾಗರಾಜರಾಯರು ಮಾಡಿರುವ ಪ್ರಯತ್ನವೇ, ವಿವಿಧೋದ್ದೇಶಗಳಿಗಾಗಿ ಮಣಿಗಳನ್ನು ಬಳಸುವ ವಿಧಾನವನ್ನು ಅವುಗಳ ಹಿನ್ನೆಲೆಯ ಸಮರ್ಥನೆಗಳನ್ನು ಕುರಿತ ಪ್ರಥಮ ಕನ್ನಡ ಗ್ರಂಥ ಎಂದು ನನ್ನ ಭಾವನೆ, ಭಾಷೆ ಸರಳವಾಗಿದೆ. ಅನಕ್ಷರಸ್ಥರೂ ಅದನ್ನು ಗ್ರಹಿಸಬಹುದು, ಇಂತಹ ಉಪಯುಕ್ತ ಗ್ರಂಥವನ್ನು ಹೊರತಂದುದಕ್ಕಾಗಿ ಅವರನ್ನು ನಾನು ಅಭಿನಂದಿಸಿ, ಅವರಿಗೆ ಎಲ್ಲ ಯಶಸ್ಸನ್ನೂ ಕೋರುತ್ತೇನೆ. ಇದರ ಉಪಯೋಗವನ್ನು ಪ್ರತಿಯೊಬ್ಬರೂ ಪಡೆಯಬೇಕೆಂದು ಆಶಿಸುತ್ತೇನೆ.

ಬೆಂಗಳೂರು, 11-7-1983 — ರಾಜೇಶ್ವರಿ ರಾಮನ್

# ಮುನ್ನುಡಿ

**ಡಾ|| ಬಿ. ವಿ. ರಾಮನ್** ರವರಿಂದ
ಸಂಪಾದಕರು : 'ದಿ ಅಸ್ಟ್ರಾಲಜಿಕಲ್ ಮ್ಯಾಗಜೈನ್
"ಶ್ರೀ ರಾಜೇಶ್ವರಿ", ಶೇಷಾದ್ರಿಪುರಂ, ಬೆಂಗಳೂರು – 20

ಅನರ್ಘ್ಯ ರತ್ನಗಳ ಪ್ರೇಮವು ಮಾನವ ಹೃದಯದಲ್ಲಿ ಆಳವಾಗಿ ತಳವೂರಿದೆ, ರತ್ನಗಳನ್ನು, ಅರ್ಥಾತ್ ಮಣಿಗಳನ್ನು, ಮನುಷ್ಯನು ಅನಾದಿಕಾಲದಿಂದ ಆಭರಣಗಳಿಗಾಗಿಯೋ, ಕೆಟ್ಟ ಪ್ರಭಾವಗಳ ನಿವಾರಣೆಗಾಗಿಯೋ ಇಲ್ಲವೇ ಸತ್ಫಲಗಳನ್ನು ಪಡೆಯುವುದಕ್ಕಾಗಿಯೋ ಕವಚಗಳಾಗಿ ಅಂದರೆ ತಾಯಿತ, ಯಂತ್ರಗಳಾಗಿಯು ಉಪಯೋಗಿಸುತ್ತ ಬಂದಿದ್ದಾನೆ. ವರಾಹ ಮಿಹಿರಾಚಾರ್ಯನು ತನ್ನ "ಬೃಹತ್ ಸಂಹಿತೆ"ಯಲ್ಲಿ ಹೇಳುವಂತೆ 'ಒಳ್ಳೆ ಲಕ್ಷಣಗಳಿಂದ ಕೂಡಿದ ಮಣಿಯು ಸಂಪದವನ್ನು ಕೊಡುತ್ತದೆ. ದುರ್ಲಕ್ಷಣಗಳಿಂದ ಕೂಡಿದುದು ದೌರ್ಭಾಗ್ಯವನ್ನು ಉಂಟುಮಾಡುತ್ತದೆ.'

ನಾನೀಗ ಮುನ್ನುಡಿಯನ್ನು ಬರೆದುಕೊಡುತ್ತಿರುವ ಗ್ರಂಥವಾದ "ರತ್ನರಹಸ್ಯ"ದಲ್ಲಿ ಲೇಖಕ ಶ್ರೀ ಕೆ. ನಾಗರಾಜರಾಯರು ಪ್ರಶಸ್ತವಾದ ಮಣಿಗಳನ್ನು ಕುರಿತು ಸಮರ್ಥವಾಗಿ ವರ್ಣಿಸಿ, ಅವನ್ನು ಮನುಷ್ಯನ ಸಂಕಟ ನಿವಾರಣೆಗೆ ಹೇಗೆ ಉಪಯೋಗಿಸಿಕೊಳ್ಳಬಹುದು ಎಂದು ವಿವರಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಪ್ರಶಸ್ತವಾದ ಹರಳುಗಳನ್ನು ಅದೃಷ್ಟ ಪಡೆಯಲು ಉಪಯೋಗಿಸುತ್ತಿದ್ದ ಬಗೆಯನ್ನು ಬಣ್ಣಿಸಿದ್ದಾರೆ. ಅವರು ಶ್ರೀಚಕ್ರವನ್ನು ನವರತ್ನಗಳಿಂದ ರಚಿಸಿದ್ದು ಎಂದು ಹೇಳಿರುವುದು ಯುಕ್ತವಾದ ಮಾತು.

ಪ್ರಶಸ್ತ ಮಣಿಗಳ ರಾಸಾಯನಿಕ ಭೌತಿಕ ರಚನೆ, ಅವುಗಳಲ್ಲಿರುವ ಗುಣಕಾರಿಯಾದ ಲಕ್ಷಣಗಳು ಚೆನ್ನಾಗಿ ಮೂಡಿಬಂದಿವೆ. ಉಂಗುರಗಳಲ್ಲಿ ನವರತ್ನಗಳನ್ನು ಖಚಿತಗೊಳಿಸುವ ವಿಧಾನ, ಸಾಮುದ್ರಿಕ ಶಾಸ್ತ್ರಕ್ಕೂ ಇರುವ ಸಂಬಂಧ – ಮುಂತಾಗಿ ಎಲ್ಲವನ್ನೂ ಸವಿಶದವಾಗಿ ಸುಲಭಗ್ರಾಹ್ಯವಾದ ಸರಳ ಕನ್ನಡ ಭಾಷೆಯಲ್ಲಿ ನಿರೂಪಿಸಲಾಗಿದೆ.

ನನಗೆ ತಿಳಿದವಟ್ಟಿಗೆ, ಕನ್ನಡ ಭಾಷೆಯಲ್ಲಿ ಮಣಿಗಳನ್ನು ಕುರಿತ ಸರ್ವಗ್ರಾಹ್ಯವಾದ ಇಂಥ ಪುಸ್ತಕ ಮತ್ತೊಂದು ಹೊರಬಂದಿಲ್ಲ.

ಶ್ರೀ ನಾಗರಾಜರಾಯರು ಜಯಪ್ರದವಾದ ಜ್ಯೋತಿಷಿಯೆಂದೂ, ಜ್ಯೋತಿಷ ಪ್ರಾಧ್ಯಾಪಕರೆಂದೂ ಈಗಾಗಲೇ ಖ್ಯಾತನಾಮರಾಗಿದ್ದಾರೆ. ಈ ಶಾಸ್ತ್ರಗಳನ್ನು ಕನ್ನಡ ಭಾಷೆಯಲ್ಲಿ ವ್ಯಾಖ್ಯಾನ ಮಾಡುವವರಾಗಿಯೂ ತಮ್ಮ ಸಾಮರ್ಥ್ಯವನ್ನು ಪ್ರಕಟಿಸಿದ್ದಾರೆ.

ಮಣಿಗಳನ್ನು ಸರಿಯಾದ ಕ್ರಮದಲ್ಲಿ ಉಪಯೋಗಿಸಿದರೆ, ಅವು ಅದೃಷ್ಟಕಾರಿಗಳಾಗುತ್ತವೆ ಎಂಬ ಮಹತ್ವವನ್ನು ಕನ್ನಡ ಜನತೆಯ ಮುಂದಿಡಲು ಗ್ರಂಥಕರ್ತರು ಕೈಗೊಂಡಿರುವ ಪ್ರಯತ್ನಕ್ಕೆ ಭಗವದನುಗ್ರಹವುಂಟಾಗಲಿ ಎಂದು ಹಾರೈಸುತ್ತೇನೆ.

ಬೆಂಗಳೂರು
27–7–1983

ಬಿ. ವಿ. ರಾಮನ್

---

## ಹಾರೈಕೆ

ನವರತ್ನ ಮತ್ತು ಉಪರತ್ನಗಳು ಮಾನವನ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎಂದುದನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸಿ ರತ್ನಗಳಲ್ಲಿರುವ ರಾಸಾಯನಿಕ ಹಾಗೂ ವೈದ್ಯಕೀಯ ಗುಣಗಳಿಂದ ನಮ್ಮ ಅಭಿವೃದ್ಧಿಗೆ ಅಥವ ವಿನಾಶಕ್ಕೆ ಕಾರಣವೆಂಬುದನ್ನು ಕನ್ನಡದಲ್ಲಿ ಶೃತಪಡಿಸಿರುವ ನನ್ನ ಆತ್ಮೀಯ ಗೆಳೆಯರಾದ ಜ್ಯೋತಿಷ ಶಿರೋಮಣಿ, ಶಾಸ್ತ್ರ ಪ್ರವೀಣ ಸನ್ಮಾನ್ಯ ಶ್ರೀ ಕೆ. ನಾಗರಾಜರಾವ್‌ರವರಿಗೆ ನನ್ನ ಆತ್ಮೀಯ ಶುಭಾಶೀರ್ವಾದಪೂರ್ವಕ ಅಭಿನಂದನೆಗಳು.

ಶ್ರೀಯುತರ "ರತ್ನರಹಸ್ಯ" ಗ್ರಂಥ ಶ್ರೀಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ, ಆಕರ್ಷಣೀಯ ಶೈಲಿಯಲ್ಲಿ ಹೊರಬರುತ್ತಿರುವುದು ಕನ್ನಡದಲ್ಲಿ ಇದೇ ಮೊದಲು.

ಈ ಗ್ರಂಥದ ಕರ್ತೃ ಇದೇ ರೀತಿ ಆರ್ಷೇಯ ತತ್ವದ ಆಧಾರದ ಮೇಲೆ, ಆಧುನಿಕ ಜೀವನಕ್ಕೆ ಸಂಬಂಧಿಸಿದಂತೆ ಹೊಸ ಹೊಸ ಗ್ರಂಥಗಳನ್ನು ರಚಿಸಲಿ ಎಂದು ಹಾರೈಸುತ್ತೇನೆ.

19–2–1984

ಜ್ಯೋತಿಷ ಸಾಮ್ರಾಟ್ ಡಿ. ಸುಬ್ಬರಾವ್

# ಪ್ರಸ್ತಾವನೆ

ಡಾ॥ ಕೆ. ನಾಗರಾಜರಾಯರದು ವೈಚಾರಿಕ ಮನಸ್ಸು. ವಿಷಯಗಳನ್ನು ಬುಡಮಟ್ಟ ಪರಾಮರ್ಶಿಸಿ, ವಿಚಾರ ನಿಕಷಕ್ಕೆ ಸಿಕ್ಕಿ, ಅದಕ್ಕೆ ಹತ್ತಿಕೊಂಡ ಮೌಢ್ಯ ಮೂಢನಂಬಿಕೆಗಳೆಂಬ ಮಾಲಿನ್ಯ ಕಳೆದು, "ಹಂಸಕ್ಷೀರನ್ಯಾಯ"ದಂತೆ ವೈಜ್ಞಾನಿಕ ವಾದುದನ್ನೇ ಬೇರ್ಪಡಿಸಿ, ತಮ್ಮದೇ ಸೋಪಜ್ಞತೆ ಹಾಗೂ ಧಾಟಿಯಿಂದ ವಿಷಯಗಳನ್ನು ನಿರೂಪಿಸುವ ಒಂದು ಹೊಸತನ ಅವರಲ್ಲಿ ಕಂಡುಬರುತ್ತದೆ. ಅದರಲ್ಲೂ ಜ್ಯೋತಿಷ್ಯದಂತಹ ವಿಷಯವನ್ನು ಪ್ರತಿಪಾದಿಸುವಾಗ ಎಷ್ಟು ಎಚ್ಚರದಿಂದಿದ್ದರೂ ಸಾಲದು. ಇತ್ತಕಡೆಗೇ ಹೆಚ್ಚು ಒಲಿಯಿತೆಂದರೆ ಮೌಢ್ಯ ಮೂಢನಂಬಿಕೆಗಳ ಕಂದರಕ್ಕೆ ಬೀಳಬಹುದು. ಅತ್ತಕಡೆಗೇ ಹೆಚ್ಚು ವಾಲಿತೆಂದರೆ ವೈಜ್ಞಾನಿಕ ವಿಚಾರಸರಣಿಯ ಕೊಂಡಿಯೇ ಕಳಚಿಕೊಂಡು ಪ್ರಪಂಚಕ್ಕೆ ಉರುಳ ಬಹುದು. ಹಳೆಯ ಶಾಸ್ತ್ರವಿಧಾನ ಹಾಗೂ ಹೊಸ ವೈಜ್ಞಾನಿಕ ರೀತಿ ಈ ಎರಡನ್ನು ಸಮಾನಾಂತರವಾಗಿ ರೂಢಿಸಿಕೊಂಡು ಆಧುನಿಕ ಜಗತ್ತಿಗೆ, ವಿಚಾರವಂತ ಮನಸ್ಸಿಗೆ ಜ್ಯೋತಿಷ್ಯ ವಿಷಯವನ್ನು ರೋಚಕವಾಗಿ ಹಾಗೆಯೇ ವೈಚಾರಿಕವಾಗಿ ಹೇಳುವ ಕಲೆಯನ್ನು ಶ್ರೀ ಕೆ. ನಾಗರಾಜರಾವ್ ಶ್ರಮವಹಿಸಿ ಸಾಧಿಸಿಕೊಂಡಿದ್ದಾರೆ. ಜ್ಯೋತಿಷ್ಯವನ್ನು ಅಗಾಧ ಶ್ರದ್ಧೆಯಿಂದ ಅಧ್ಯಯನ ಮಾಡಿದ್ದಾರೆ.

ಇದನ್ನು ಅರಿತೇ ನಾನು 'ಜ್ಯೋತಿಷ್ಯ'ದ ವಿಷಯದ ಲೇಖನಮಾಲೆಯನ್ನು "ಪ್ರಜಾಮತ"ದಲ್ಲಿ ಬರೆಯುವಂತೆ ಅವರನ್ನು ಆಹ್ವಾನಿಸಿದೆ. ಈ ಆಹ್ವಾನವನ್ನು ಅವರು ಒಂದು ಸವಾಲೆನ್ನುವಂತೆಯೇ ಅಂಗೀಕರಿಸಿದರು. ಒಂದು ಅಖಂಡ ಆತ್ಮವಿಶ್ವಾಸದಿಂದಲೇ ಅವರು ಈ ಲೇಖನಮಾಲೆಯನ್ನು ಪ್ರಾರಂಭಿಸಿದರು. **"ಹಸ್ತದಲ್ಲಿ ಹಣೆಬರಹ"** ಎಂಬ ಶೀರ್ಷಿಕೆಯಲ್ಲಿ ಹಸ್ತ ಸಾಮುದ್ರಿಕವಾದ ಲೇಖನ ಮಾಲೆಯನ್ನು ಪ್ರಾರಂಭಿಸಿ, ಒಡನೆಯೇ ಜನಪ್ರಿಯಗೊಳಿಸಿದರು. ಅದರ ಹಿಂದೆಯೇ ಪ್ರಾರಂಭವಾದ ಲೇಖನಮಾಲೆ **"ರತ್ನರಹಸ್ಯ"** ಒಂದು ಅದ್ಭುತ ಪತ್ತೇದಾರಿ ಕಾದಂಬರಿಯಂತೆ ಈ ಲೇಖನಮಾಲೆ ನವರತ್ನಗಳ ರಮ್ಯ ರೋಮಾಂಚಕ ಕಥೆಯನ್ನು ವಾರ ವಾರ ಬಹಿರಂಗಗೊಳಿಸಿತು. ಲಕ್ಷಾಂತರ "ಪ್ರಜಾಮತ" ಓದುಗರು ಈ ಲೇಖನಗಳಿಗೆ ಸ್ಪಂದಿಸಿದರು. ರತ್ನಗಳ ವಿಷಯವನ್ನು ವಿಂಗಡಿಸಿಕೊಂಡ ಬಗ್ಗೆ ಹೇಳುವ ಧಾಟಿ ಹೊಸತನದಿಂದ ಕೂಡಿ, ಜನಪ್ರಿಯ ಲೇಖನ ಮಾಲೆಯೇ ಆಯಿತು.

ಶ್ರೀ ಕೆ. ನಾಗರಾಜರಾವ್ ಆ ಲೇಖನಗಳನ್ನೇ ಮತ್ತಷ್ಟು ಇಲ್ಲಿ ವಿಸ್ತರಿಸಿ ಹೊಸ ಸಂಗತಿಗಳನ್ನು ಸೇರಿಸಿ, ಪುಸ್ತಕ ರೂಪವಾಗಿ ಹೊರತರುತ್ತಿದ್ದಾರೆ.

ಜ್ಯೋತಿಷ ಶಾಸ್ತ್ರದಲ್ಲಿ ಮತ್ತು ಇನ್ನಿತರ ಭಾರತದ ಪ್ರಾಚೀನ ಗ್ರಂಥಗಳಲ್ಲಿ ಪ್ರಸ್ತಾಪಿಸಲಾದ ನವರತ್ನಗಳ ಮಹಿಮೆ ಹಾಗೂ ಆಧುನಿಕ ವಿಜ್ಞಾನ ಈ ಅಮೂಲ್ಯ ಹರಳುಗಳ ಬಗೆಗೆ ಏನು ಹೇಳುತ್ತದೆ, ಮಾನವನಿಗೂ – ರತ್ನಗಳಿಗೂ ಇರುವ ಬಾಂಧವ್ಯವೇನು, ಎಲ್ಲ ಮಾನವರೂ ರತ್ನಗಳನ್ನು ಹೊಂದಲು ಯೋಗ್ಯರೆ, ಯಾವ ಮನುಷ್ಯನಿಗೆ ಯಾವ ರತ್ನ ಒಲಿಯುತ್ತದೆ. ಇಲ್ಲ ಮುನಿಯುತ್ತದೆ ಎಂಬ ಈ ರಹಸ್ಯ ವಿಷಯಗಳನ್ನು ಇಲ್ಲಿ ತಿಳಿಸಿಕೊಡಲಾಗಿದೆ.

ಮಾನವರಿಗೆ ವಜ್ರವೈಢೂರ್ಯ ಗೋಮೇಧಿಕಗಳೆಂಬ, ಮುತ್ತು ನೀಲಿ ಮಾಣಿಕ್ಯಗಳೆಂಬ, ಪುಷ್ಪರಾಗ, ಪಚ್ಚೆ ಹವಳಗಳೆಂಬ ನವರತ್ನಗಳು ಪ್ರಾಪ್ರಿಯವೇ ಸರಿ. ಆದರೆ ಅವೇ ತಪ್ಪು ಬಳಕೆಯಿಂದ ಪ್ರಾಣಾಂತಿಕವಾಗಬಹುದು. ಯಾವ ರತ್ನ ಯಾರಿಗೆ ಹಿತ, ವೃದ್ಧಿ ಶೀಲ ಎನ್ನುವುದನ್ನು ಎಚ್ಚರಿಕೆಯಿಂದ ಅರಿಯಬೇಕು. ಅಂತಹ ತಿಳಿವಳಿಕೆಯನ್ನು ನೀಡುವುದರಲ್ಲಿ ಶ್ರೀ ಕೆ. ನಾಗರಾಜರಾಯರ ಈ "ರತ್ನರಹಸ್ಯ" ಉಪಯುಕ್ತವಾಗಿದೆ. ಆಯುರ್ವೇದ ಗ್ರಂಥಗಳಲ್ಲಿ ನವರತ್ನಗಳಿಂದ ಔಷಧಿ, ಸಪ್ತಧಾತು – ಸಪ್ತವರ್ಣಮಯ ಶರೀರ ಮತ್ತು ರತ್ನಗಳು ಇಂತಹ ಪರಿಚ್ಛೇದಗಳಲ್ಲಿ ಹೇಗೆ ಶರೀರಕ್ಕೂ ಪ್ರಕೃತಿಗೂ ನೇರ ಬಾಂಧವ್ಯವಿದ್ದು ರತ್ನಗಳು ಸಪ್ತಧಾತುವನ್ನು ಹೊಂದಿಕೊಳ್ಳುತ್ತವೆ ಎಂಬ ವಿಷಯವನ್ನು ಉಪಯುಕ್ತವಾಗಿ ತಿಳಿಸಲಾಗಿದೆ.

ಕನ್ನಡ ಜನಕ್ಕೆ ವಿಷಯ ತಿಳಿದುಕೊಳ್ಳಬೇಕೆನ್ನುವ ಹಂಬಲ ಉಳ್ಳವರಿಗೆ ನನ್ನ ಈ ಮಿತ್ರರ "ರತ್ನರಹಸ್ಯ" ಗ್ರಂಥ ಹೆಚ್ಚು ಪ್ರಯೋಜನಕಾರಿಯಾಗಿದೆ. ಶ್ರೀ ಕೆ. ನಾಗರಾಜರಾವ್ ಅವರು ಇಂತಹ ಕಾಣಿಕೆಗಳನ್ನು ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದಂತೆ ನಿಲ್ಲದೆ ನೀಡುತ್ತ ಬಂದು ಕನ್ನಡ ಭಂಡಾರವನ್ನು ಹೆಚ್ಚಿಸಲಿ.

2ನೇ ಏಪ್ರಿಲ್ 1984

**ಹ. ನೆಂ. ನಾಗರಾಜರಾವ್**
ಸಂಪಾದಕ, 'ಪ್ರಜಾಮತ'

# ನಲ್ನುಡಿ

## : ರತ್ನರಹಸ್ಯ :

ನಮ್ಮ ಹಳೆಯ ವಿಚಾರಧಾರೆಗಳು ಇಂದಿಗೂ ಮೌಲ್ಯವನ್ನು ಕಳೆದುಕೊಳ್ಳದ ನಾಣ್ಯಗಳಂತೆ ಇವೆ. ಆದರೆ ಅದನ್ನು ಇಂದಿನ ಜನರು ವೈಜ್ಞಾನಿಕ ಮನೋಧರ್ಮಕ್ಕೆ ಹೊಂದುವಂತೆ ಹಾಗೂ ಮನದಟ್ಟಾಗುವಂತೆ ಪ್ರತಿಪಾದಿಸುವವರು ಬೇಕು.

ನಮ್ಮ ಪುರಾಣಾದಿಗಳಲ್ಲಿಯೂ ಹಾಗೂ ಶಾಸ್ತ್ರ ಗ್ರಂಥಗಳಲ್ಲಿಯೂ ಅಂತಹ ಜನೋಪಯುಕ್ತವಾದ ವಿಚಾರಗಳು ಬೆಳಕು ಕಾಣದ ಇಂದಿಗೂ ಉಳಿದಿವೆಯಾದರೂ ಪಾಶ್ಚಾತ್ಯ ದೇಶದ ವಿದ್ವಾಂಸರು ತಮ್ಮ ನಿಶಿತಮತಿಯ ಪ್ರಭಾವದಿಂದ ಅವುಗಳಲ್ಲಿರುವ ಸಾರವನ್ನು ತಮ್ಮದೆನ್ನುವ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ವಸ್ತು ಯಾರದೇ ಇರಲಿ ಜನರ ಆದರಣೆಗೆ ಪಾತ್ರವಾದಾಗ ಅದರ ಬೇಡಿಕೆಯೂ ಅಷ್ಟೇ ತೀವ್ರವಾಗುತ್ತದೆ. ಹೀಗಾಗಿ ಪಾಶ್ಚಾತ್ಯ ದೇಶದಲ್ಲಿ ಭಾರತೀಯ ತತ್ತ್ವಗಳು ಅದರ ವೇಷಭೂಷಣಗಳಲ್ಲಿಯೇ ಮೆರೆದಿವೆ.

"**ರತ್ನರಹಸ್ಯ**" ಎಂಬ ಕೆ. ನಾಗರಾಜರಾಯರ ಗ್ರಂಥವೂ ಕೂಡ ಇಂತಹ ಮಹತ್ತ್ವಪೂರ್ಣವಾದ ವಿಷಯವನ್ನು ಪ್ರತಿಪಾದಿಸುತ್ತದೆ. ವಿಷ್ಣುವಿನಲ್ಲಿರುವ ಕೌಸ್ತುಭಮಣಿಯಾಗಲಿ, ಸತ್ರಾಜಿತನಿಂದ ಕೃಷ್ಣನತನಕ ಚೈತ್ರಯಾತ್ರೆ ಮಾಡಿದ "ಸ್ಯಮಂತಕಮಣಿ"ಯಾಗಲಿ ಸಾಮಾನ್ಯ ಜನರಲ್ಲಿರುವ ವಿವಿಧ ಮಣಿಗಳೇ ಆಗಲಿ ಅದಕ್ಕೊಂದು ಅದ್ವಿತೀಯ ಇತಿಹಾಸವೇ ಇದೆ. "ಕೋಹಿನೂರ್" ಯಾವ ತರದ ವಿಶ್ವಪ್ರಭಾವ ಬೀರಿದ ವಿಷಯ ಇತಿಹಾಸವೇದ್ಯ. ಈ ಸತ್ಯ ಹಾಗೂ ಸತ್ತ್ವವನ್ನು ತನ್ನ ಸುಂದರ ಭಾಷೆಯಲ್ಲಿ ಸೆರೆ ಹಿಡಿದ ಪುಸ್ತಕ "**ರತ್ನರಹಸ್ಯ**". 'ಧಾರಯೇತ್ ಸತತಂ ರತ್ನಸಿದ್ಧ ಮಂತ್ರ ಮಹೌಷಧೀಃ" ಎಂಬ ವಾಗ್ಭಟನ ಮಾತು ರತ್ನಧಾರಣೆಗೆ ಒಂದು ಶಾಸ್ತ್ರೀಯ ಬೆಂಬಲ. ಅದನ್ನು ಹೇಗೆ ಧರಿಸಬೇಕು, ಯಾವ ತರದ ರತ್ನಗಳನ್ನು ಹೇಗೆ ಉಪಯೋಗಿಸಬೇಕು ಎಂಬ ಸಮಗ್ರ ಚಿತ್ರವನ್ನು ಈ ಪುಸ್ತಕದಲ್ಲಿ ನಮ್ಮ ಮುಂದೆ ಹೃದಯಕ್ಕೊಪ್ಪುವ ರೀತಿಯಲ್ಲಿ ಪ್ರತಿಪಾದಿಸಲಾಗಿದೆ.

ಸಾರಸ್ವತ ಮಹಾವಿಶ್ವವಿದ್ಯಾನಿಲಯದ ಜ್ಯೋತಿಷ್ಯ ವಿಭಾಗದ ನಿರ್ದೇಶಕರಾದ ವರಾಹಮಿಹಿರ ಜ್ಯೋತಿಷ ಸಂಶೋಧನ ಕೇಂದ್ರದ ಪ್ರಧಾನರಾದ ಕೆ. ನಾಗರಾಜ ರಾಯರು ಬರೆದ ಪುಸ್ತಕವು ನಿಜವಾಗಿ ಹೊಸ ಬೆಳಕನ್ನು ಚೆಲ್ಲಿದೆಯೆಂದು ನನ್ನ ಭಾವನೆ.

**ಎ. ವಾಸುದೇವಬಲ್ಲಾಳ**
ಸಾರಸ್ವತ ಮಹಾವಿಶ್ವವಿದ್ಯಾಲಯ ಟ್ರಸ್ಟ್
6/3, ಎಚ್.ಬಿ. ಸಮಾಜ ಲಿಂಕ್ ರೋಡ್
ಬಸವನಗುಡಿ, ಬೆಂಗಳೂರು – 560 004

# ಪ್ರವೇಶಿಕೆ

ರತ್ನಗಳಿಂದ ಭಾಗ್ಯ, ಆಕರ್ಷಣೆ, ರಕ್ಷಣೆ, ಕಾರ್ಯಸಿದ್ಧಿ, ಐಹಿಕ ಸುಖ ಅನುಭವಿಸಲು, ಆಧ್ಯಾತ್ಮಿಕ ಪ್ರಗತಿ ಕಾಣಲು ಭಯ–ಭೀತಿಗಳಿಂದ ವಿಮುಕ್ತರಾಗಲು ರತ್ನಗಳುಂಟು. ರತ್ನಭಸ್ಮಗಳಿಂದ, ರತ್ನರಸದ ಗುಳಿಗೆಗಳಿಂದ, ರತ್ನದುಂಗುರ ಧರಿಸುವುದರಿಂದ ನಾನಾ ರೋಗಗಳ ನಿವಾರಣೆ, ರತ್ನದ ಕಿರಣಗಳನ್ನು ರೋಗಿಯ ಭಾವಚಿತ್ರದ ಮೂಲಕ ಹಾಯಿಸುವುದರಿಂದಲೂ ರೋಗದಿಂದ ವಿಮುಕ್ತಿ ನವಗ್ರಹ ಪೀಡಾ ಪರಿಹಾರಕ್ಕೆ ನವರತ್ನದುಂಗುರ ಧಾರಣೆ; ಐಶ್ವರ್ಯ ರೂಪಕ ಲಕ್ಷ್ಮಿ – "ರತ್ನಗಳು". ಆದಾಗ್ಯೂ ಒಬ್ಬರಿಗೆ ಶುಭವುಂಟುಮಾಡುವ ರತ್ನ ಮತ್ತೊಬ್ಬರಿಗೆ ಅಶುಭವಾಗಿ ಪರಿಣಮಿಸಿರುವ ನಿದರ್ಶನಗಳೂ ಇವೆ. ಈ ರೀತ್ಯ ರತ್ನಗಳ ಹಲವಾರು ಪ್ರಭಾವಗಳನ್ನು, ಪ್ರಯೋಗಗಳನ್ನು ಅವುಗಳ ಸತ್ಯಾಸತ್ಯತೆಯನ್ನು ನಿಷ್ಕರ್ಷಿಸಲು ಸೃಷ್ಟಿಯಾದದ್ದು ಈ ನನ್ನ ಕೃತಿ "ರತ್ನರಹಸ್ಯ".

ರತ್ನಗಳು ವಿಶ್ವದ ವರ್ಣಗಳನ್ನು ತಮ್ಮಲ್ಲಿ ಸೆರೆಹಿಡಿದಿವೆಯೇ ? ರತ್ನದಲ್ಲಿ ಅಡಗಿರುವ ವರ್ಣಪ್ರಭಾ ಕಿರಣಗಳೂ, ರಾಸಾಯನಿಕ ವಸ್ತುಗಳೂ ಮಾನವ ಶರೀರದ ಆಂತರಿಕ ಹಾಗೂ ಬಾಹ್ಯವರ್ಣಪ್ರಭೆಗಳೂ, ರಾಸಾಯನಿಕ ಸಂಯೋಜನೆಯೂ ಏಕಸ್ವಾಮ್ಯವುಳ್ಳವೇ ? ಈ ರೀತ್ಯ ಹಲವಾರು ಪ್ರಶ್ನೆಗಳು ಉದ್ಭವಿಸಿದ್ದು ನನ್ನ ವಯಸ್ಸು ಹದಿನೈದಿದ್ದಾಗ. ಅಂದಿನಿಂದ ಈ ವರೆಗೆ ಈ ಮೂವತ್ತು ವರ್ಷಗಳಲ್ಲಿ ಕಂಡ ಸತ್ಯವನ್ನು, ಅಧ್ಯಯನ ಅನುಭವಗಳನ್ನು, ಹಲವಾರು ವ್ಯಕ್ತಿಗಳು ರತ್ನಗಳನ್ನು ಬಳಸಿ ಅನುಭವಿಸಿದ ಫಲಾಫಲಗಳನ್ನು, ಸ್ವಯಂ ಆಗಿ ನಡೆಸಿದ ಪ್ರಯೋಗಗಳನ್ನು ಸಂಗ್ರಹಿಸಿ ಗ್ರಂಥ ರೂಪದಲ್ಲಿ ತರಲಿಚ್ಛಿಸಿದ್ದರ ಫಲ – "ರತ್ನರಹಸ್ಯ".

ಶ್ರೀರಾಮ ಭಕ್ತನಾದ ಹನುಮಂತ, ರಾವಣನ ಸೆರೆಮನೆಯಲ್ಲಿದ್ದ ಸೀತಾ ದೇವಿಯನ್ನು ಕಂಡು ತಾನು ರಾಮಭಕ್ತನು, ವಿಶ್ವಾಸಾರ್ಹನು ಎಂದು ಪ್ರತಿಪಾದಿಸಲು ಶ್ರೀರಾಮಚಂದ್ರನ ಮುಂದ್ರೆಯುಂಗುರ ತೋರಿಸಿದ, ಸಂಶಯ ನೀಗಿದ. ಈ ಮುದ್ರೆಯುಂಗರ ಕೇವಲ ಬಂಗಾರದಲ್ಲಿ ಮಾಡಿದ್ದೋ ಅಥವ ಸಾಮಾನ್ಯ ರತ್ನಖಚಿತ ವಾದದ್ದೋ ಆದಲ್ಲಿ ಸೀತಾದೇವಿ ಅದನ್ನು ರಾಮನದೇ ಎಂದು ನಿಷ್ಕರ್ಷಿಸಲು ಸಾಧ್ಯವಾಗುತ್ತಿರಲಿಲ್ಲ. ಆದರಲ್ಲಿದ್ದ ರತ್ನ ಬೇರೆಲ್ಲೂ ಸಿಗದ ರತ್ನವಿದ್ದಿರಬೇಕಲ್ಲವೇ ? ಇದು ರಾಮಾಯಣದಲ್ಲಿ ಕಂಡುಬರುವ ವಿಚಾರ.

ಸೂರ್ಯದೇವನಿಂದ ವರವಾಗಿ ಪಡೆದ ಕರ್ಣನ ಕುಂಡಲಗಳು, ಉಗ್ರ ತಪಸ್ಸು ಗೈದು ಪ್ರಸೇನನು ಹೊಂದಿದ ಶ್ಯಮಂತಕಮಣಿ, ದಾಹ-ಹಸಿವು, ಭಯ-ಭೀತಿಗಳನ್ನು ನಿವಾರಿಸುವ ಪ್ರಭಾವವುಳ್ಳ ಅಶ್ವತ್ಥಾಮನ ಶಿರಸ್ಸಿನ ಮಣಿ ಇವು ಮಹಾಭಾರತದಲ್ಲಿ ಕಂಡುಬರುವ ದೃಷ್ಯಗಳು.

ವಿಶ್ವದ ಪ್ರಪ್ರಥಮ ಆಧ್ಯಾತ್ಮಿಕ ಕೊಡುಗೆ ಭಾರತದ "ಋಗ್ವೇದ" ಇದರ ಮಂತ್ರಗಳಲ್ಲಿ ರತ್ನಗಳ ಪ್ರಸ್ತಾವ, ವೇದಾಂತಗಳಲ್ಲಿ ಪ್ರಮುಖವಾದದ್ದು "ಜ್ಯೋತಿಶ್ಶಾಸ್ತ್ರ" ಇದರ ಗ್ರಂಥಗಳಲ್ಲಿ-ಸಂಹಿತೆಗಳಲ್ಲಿ ಗ್ರಹರತ್ನ ಸಂಬಂಧ. ಆಯಸ್ಸು-ಆರೋಗ್ಯ ತತ್ತ್ವಗಳನ್ನು ತಿಳಿಸುವುದು, ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ "ಆಯುರ್ವೇದ" ಇದರ ಗ್ರಂಥಗಳಲ್ಲಿ ರತ್ನಭಸ್ಮಗಳ ಪ್ರಯೋಗ ರೋಗ ನಿವಾರಣೆಗೆ.

ಭಾರತೀಯರ ವೈಜ್ಞಾನಿಕ ಪ್ರಜ್ಞೆಯನ್ನು ಕಥಾರೂಪದಲ್ಲಿ ಪ್ರತಿಪಾದಿಸುವುದು ಹದಿನೆಂಟು ಪುರಾಣಗಳು. ಅವುಗಳ ಪೈಕಿ ಅಗ್ನಿಪುರಾಣ, ವಿಷ್ಣುಪುರಾಣ, ಮತ್ಸ್ಯ ಪುರಾಣ, ಕೂರ್ಮಪುರಾಣ ಇತ್ಯಾದಿಗಳಲ್ಲಿ ರತ್ನಗಳ ರಹಸ್ಯ ಪ್ರಭಾವವನ್ನು ವಿವರಿಸಲಾಗಿದೆ.

ರಾಮಾಯಣದ ಕಾಲ ತ್ರೇತಾಯುಗ, ಮಹಾಭಾರತದ ಕಾಲ ದ್ವಾಪರಯುಗ, ವೇದಗಳು ಅದಕ್ಕೂ ಬಹು ಹಿಂದಿನವು. ನಂತರ ಸೃಷ್ಟಿಯಾದವು ಪುರಾಣಗಳು. ಅಂದಿನಿಂದ ಇಂದಿನವರೆಗೆ ರತ್ನಗಳ ವಿಚಾರ ಲಹರಿ ಅಗಾಧವಾಗಿ ಬೆಳೆದಿದೆ.

ಇದರಿಂದ ನಮಗೆ ವ್ಯಕ್ತವಾಗುವುದು ಭಾರತೀಯರಿಗೆ ಮಣಿಮಂತ್ರಗಳ ಪ್ರಭಾವ ಯುಗಯುಗಾಂತರಗಳಿಂದ ತಿಳಿದಿತ್ತೆಂದು ಅವರ ಜ್ಞಾನ ಪರಕೀಯರಿಂದ ಪರಾವಲಂಬನೆಯಿಂದ ಪಡೆದ ಜ್ಞಾನವಲ್ಲವೆಂದು.

ಇವೆಲ್ಲದರ ಜೊತೆಯಲ್ಲೇ ಬೆಳೆದು ನಿಂತ ವಿದ್ಯೆಗಳು, ರಸವಾದ, ಖನಿಜ ವಿಜ್ಞಾನ, ಯೋಗವಿದ್ಯೆ ಇತ್ಯಾದಿಗಳಲ್ಲೂ ರತ್ನಗಳ ಪ್ರಸ್ತಾಪವಿದೆ.

ಈ ರತ್ನಗಳ ವ್ಯಾಮೋಹ ದೇವಾದಿದೇವತೆಗಳಿಂದ ಸಾಮಾನ್ಯ ಮಾನವನಿಗೂ ಇತ್ತೆಂದು ; ರತ್ನಗಳಿಂದ ರಕ್ತಪಾತ, ರಾಜ್ಯನಷ್ಟಗಳೂ ಆಗಿವೆಯೆಂದು ಹಲವಾರು ಶುಭಫಲಗಳನ್ನು ಮನಗಂಡಿರುವರೆಂದು ವಿಶ್ವದ ಇತಿಹಾಸದ ಪುಟಗಳಲ್ಲಿ ಸಾಕಷ್ಟು ಪುರಾವೆ ದೊರಕುವುದು.

ನೀಲಮಣಿ ಉಂಗುರದ ಮೂಲಕ ಭೂತ-ಭವಿಷ್ಯತ್ವರ್ತಮಾನ ತಿಳಿಸುವ ತುಮಕೂರಿನ ಅಂಜನ ವಿದ್ಯಾ ಪರಿಣಿತರನ್ನು ಸಂದರ್ಶಿಸಿದ್ದೇನೆ. ಹಸ್ತರೇಖೆಗಳನ್ನು ವೀಕ್ಷಿಸಿ ಅದೃಷ್ಟ ರತ್ನವನ್ನು ನಿಶ್ಚಯಿಸುವ ಈಜಿಪ್ಟಿನ ಸಾಮುದ್ರಿಕಾ ಪ್ರವೀಣರೊಬ್ಬ ರಿಂದ ರತ್ನಗಳ ಬಗ್ಗೆ ವಿಮರ್ಶಿಸಿ ಅನೇಕ ವಿಚಾರಗಳನ್ನರಿತಿದ್ದೇನೆ. ಬೊಂಬಾಯಿಯ ಜ್ಯೋತಿಷಿಯೊಬ್ಬರು ಯಾವುದೇ ವ್ಯಕ್ತಿಗೆ ನೀಲಮಣಿ ಸರಿಹೊಂದುವುದೇ ಇಲ್ಲವೇ

ಎಂದು ನಿಶ್ಚಯಿಸಲು ಆ ವ್ಯಕ್ತಿಯು ನಿದ್ರಿಸುವ ಹಾಸಿಗೆ ದಿಂಬಿನ ಕೆಳಗೆ ಮಣಿಯನ್ನು ಮೂರು ದಿನಗಳ ಕಾಲವಿಟ್ಟು ಅದರಿಂದ ಉಂಟಾಗಬಹುದಾದ ಫಲಗಳಿಂದ ನಿರ್ಧರಿಸುವ ಕ್ರಮವನ್ನು ಕಣ್ಣಾರೆ ಕಂಡಿದ್ದೇನೆ.

ಇವುಗಳಲ್ಲದೆ ಆರ್ಷೇಯ ಹಾಗೂ ಆಧುನಿಕ ರತ್ನಸಂಬಂಧಿತವಾದ ಜ್ಯೋತಿಷ, ವೈದ್ಯಗಳ ಅಧ್ಯಯನ, ರತ್ನಪರಿಣಿತರ ಸಂದರ್ಶನ, ಹಲವಾರು ಪ್ರಯೋಗಗಳಿಂದ ಕಂಡುಬಂದ ಸತ್ಯಗಳನ್ನು ಸಮಗ್ರ ದರ್ಶನ ನೀಡುವ ದೃಷ್ಟಿಯಿಂದ "ರತ್ನರಹಸ್ಯ" ವನ್ನು ರಚಿಸಿದೆ. ರತ್ನಗಳ ರಹಸ್ಯ ರಾಶ್ಯಾನುರಾಶಿಯಾಗಿದ್ದು ಸಂಪೂರ್ಣ ಚಿತ್ರಣ ನೀಡುವ ಕಾರ್ಯ ಅಸಾಧ್ಯವೇ ಸರಿ. ಸರ್ವರಿಗೂ ಉಪಯುಕ್ತವಾಗಬೇಕು, ಫಲಗಳು ತಮ್ಮ ಅನುಭವಕ್ಕೆ ಒರಬೇಕು ಎಂಬ ದೃಷ್ಟಿಯಿಂದ ಈ ಗ್ರಂಥದ ಮೊದಲ ಆರು ಅಧ್ಯಾಯಗಳು "ಪ್ರಜಾಮತ" ವಾರಪತ್ರಿಕೆಯಲ್ಲಿ ಪ್ರಕಟವಾಯ್ತು. ಪ್ರಶಂಸೆ ಸಲಹೆಗಳಿಗಾಗಿ ಸಹಸ್ರಾರು ಓದುಗರಿಂದ ಪತ್ರಗಳ ಸುರಿಮಳೆಯಾಯ್ತು. ಉಳಿದ ಅಧ್ಯಾಯಗಳು ನಾನು ಅಖಿಲ ಭಾರತ ಜ್ಯೋತಿಷ ಸಮ್ಮೇಳನಗಳಲ್ಲಿ, ಲಯನ್ಸ್ ಕ್ಲಬ್ ಸಂಘ–ಸಂಸ್ಥೆಗಳಲ್ಲಿ, ನಿಸರ್ಗ ಚಿಕಿತ್ಸಾ ಕೇಂದ್ರದಲ್ಲಿ ಮಾಡಿರುವ ಭಾಷಣಗಳ ಸಾರಾಂಶವೇ ಆಗಿದೆ.

ಈ ಗ್ರಂಥವನ್ನು ಅಧ್ಯಯನ ಮಾಡಿ ರತ್ನಗಳ ಮೂಲಕ ರೋಗಗಳನ್ನು ಗುಣಪಡಿಸಿಕೊಳ್ಳುವಂತಾದಲ್ಲಿ, ಕಷ್ಟಕಾರ್ಪಣ್ಯಗಳಿಂದ ಬಳಲುತ್ತಿರುವವರು ರತ್ನಗಳನ್ನು ಧರಿಸಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡಲ್ಲಿ, ಗ್ರಹ ಕಾಟಗಳಿಂದ ಪೀಡಿತರಾದವರು, ರತ್ನಗಳಿಂದ ದೋಷವಿಮುಕ್ತರಾದಲ್ಲಿ – ಈ ಕೃತಿಯು ಸಾರ್ಥಕ ಗೊಂಡಂತೆಯೇ ಸರಿ. ರತ್ನಗಳಿಂದ ಹೊಂದಿರುವ, ಇನ್ನು ಮುಂದೆ ಹೊಂದಬಹುದಾದ ವೈಯಕ್ತಿಕ ಅನುಭವಗಳನ್ನು ಓದುಗರು ನನ್ನ ಗಮನಕ್ಕೆ ತಂದಲ್ಲಿ ರತ್ನರಹಸ್ಯ ಭಾಗ 2ರಲ್ಲಿ ಸೇರಿಸುವೆ. ಗ್ರಂಥ ವೈಶಾಲ್ಯ ಹಾಗೂ ವಿಷಯ ಬೇಸರವಾಗದಿರಲೆಂಬ ಇಚ್ಛೆಯಿಂದ ಈ ಗ್ರಂಥದಲ್ಲಿ ಸಂಕ್ಷಿಪ್ತವಾಗಿ ಅನುಭವ, ಪ್ರಯೋಗ ಪರೀಕ್ಷಾ ವಿಧಾನಗಳನ್ನು ಕೊಡಲಾಗಿದೆ.

"**ರತ್ನರಹಸ್ಯ**"ಕ್ಕೆ '**ಶ್ರೀರಕ್ಷೆ**' ಸಾರಸ್ವತ ಮಹಾವಿಶ್ವವಿದ್ಯಾಲಯದ ಕುಲಪತಿಗಳು ಮತ್ತು ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿರವರಿಂದ ಲಭ್ಯವಾಗಿರುವುದು ನನ್ನ ಭಾಗ್ಯ. ಅವರಿಗೆ ನನ್ನ ಅನಂತ ನಮಸ್ಕಾರಗಳು.

ಈ ಗ್ರಂಥಕ್ಕೆ "ಪೀಠಿಕೆ"ಯನ್ನು ಬೆಂಗಳೂರಿನ ಸೂರ್ಯಪ್ರಕಾಶ್ ಯೋಗ ಸಂಸ್ಥೆಯ ನಿರ್ದೇಶಕಿಯವರಾದ ಶ್ರೀಮತಿ ರಾಜೇಶ್ವರಿ ರಾಮನ್‌ರವರು ಬರೆದು ಕೊಟ್ಟಿರುವರು. ಜ್ಯೋತಿಷ ಪ್ರಪಂಚಕ್ಕೆ ಆಧಾರಸ್ಥಂಭವಾಗಿರುವ ಅಂತರರಾಷ್ಟ್ರೀಯ ಖ್ಯಾತ ದೈವಜ್ಞರೂ, ಸಾರಸ್ವತ ಮಹಾವಿಶ್ವವಿದ್ಯಾಲಯದ ಉಪಕುಲಪತಿಗಳೂ ಆದ

ಡಾ॥ ಬಿ. ಎ. ರಾಮನ್‌ರವರು ನನ್ನ ಕೋರಿಕೆ ಮೇರೆ ಮುನ್ನುಡಿಯನ್ನು ಬರೆದು ಶ್ರೇಯಸ್ಸನ್ನು ಕೋರಿದ್ದಾರೆ. ಈ ಆದರ್ಶ ದಂಪತಿಗಳ ಮಾರ್ಗದರ್ಶನದಿಂದ ಸಾರಸ್ವತ ಮಹಾವಿಶ್ವವಿದ್ಯಾಲಯು ತನ್ನ ಪ್ರಗತಿ ಪಥದಲ್ಲಿ ಹೊಸ ಹೆಜ್ಜೆಯಿಟ್ಟಿದೆ. ಇವರೀರ್ವರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ನನ್ನ ಆತ್ಮೀಯ ಮಿತ್ರರೂ, "ಪ್ರಜಾಮತ" ವಾರಪತ್ರಿಕೆಯ ಮುಖ್ಯ ಸಂಪಾದಕರೂ ಆದ ಶ್ರೀ ಹ. ವೆಂ. ನಾಗರಾಜರಾಯರ ಪ್ರೇರಣೆಯೇ "ರತ್ನರಹಸ್ಯ" ಲೇಖನಗಳ ಪ್ರಕಟನೆ ಮತ್ತು ಗ್ರಂಥ ರೂಪದಲ್ಲಿ ಹೊರಬರಲು ಕಾರಣ. ಅವರು ವಿಶ್ವಾಸಪೂರ್ವಕವಾಗಿ ಬರೆದುಕೊಟ್ಟಿರುವ ಪ್ರಸ್ತಾವನೆ ಈ ಗ್ರಂಥದ ಸ್ಥಾನವನ್ನು ಹೆಚ್ಚಿಸಿದೆ. ಅವರಿಗೆ ನನ್ನ ಹೃತ್ಪೂರ್ವಕ ವಂದನೆ.

"ನಲ್ನುಡಿ"ಯನ್ನು ಬರೆದುಕೊಟ್ಟಿರುವ ಸಾರಸ್ವತ ಮಹಾವಿಶ್ವವಿದ್ಯಾಲಯದ ಕಾರ್ಯದರ್ಶಿಗಳಾದ ಶ್ರೀ ಎ. ವಾಸುದೇವ ಬಲ್ಲಾಳರು ಅನೇಕ ಉಪಯುಕ್ತ ಸಲಹೆ-ಸಹಕಾರಗಳನ್ನಿತ್ತಿದ್ದಾರೆ. ಹಿರಿಯರೂ, ಜ್ಯೋತಿರ್ವಿದ್ಯಾವಿಶಾರದರೂ ಆದ ಶ್ರೀ ಡಿ. ಸುಬ್ಬರಾವ್‌ರವರು "ಹಾರೈಕೆ" ಬರೆದುಕೊಟ್ಟಿದ್ದಾರೆ. ಇವರುಗಳಿಗೆ ನನ್ನ ಮನಃಪೂರ್ವಕ ಅಭಿನಂದನೆ.

ರತ್ನಗಳ ಪ್ರಯೋಗಿಕ ಕಾರ್ಯದಲ್ಲಿ ನೆರವಿತ್ತು, ವಿಷಯ ಸಂಗ್ರಹಣೆಗೆ ಸಹಕರಿಸಿ, ಪ್ರಕಾಶನ ಕಾರ್ಯದ ಜವಾಬ್ದಾರಿ ಹೊತ್ತವರು – ನನ್ನ ಮಗ ಚಿ॥ ಎನ್. ಕೀರ್ತಿರಾಜ್ (ಜ್ಯೋತಿಷ ಪ್ರವೀಣ) ಮತ್ತು ಮಗಳು ಚಿ॥ ಸೌ॥ ಎನ್. ಪ್ರತಿಭಾ ರಾಜಕುಮಾರಿ. ಇವರಿಗೆ ನನ್ನ ಆಶೀರ್ವಾದ. ಮುದ್ರಣ ಕಾರ್ಯ ಪೂರೈಸಿದ ನಗರ್ತಪೇಟೆಯ "ಶ್ರೀಧರ್ ಪ್ರಿಂಟರ್ಸ್"ನ ಮಾಲೀಕರಾದ ಶ್ರೀ ನಾಗೇಂದ್ರರವರಿಗೆ ವಂದನೆ. ಯಾವುದೇ ಲೋಪದೋಷಗಳಿದ್ದರೂ ಮುಂದಿನ ಆವೃತ್ತಿಯಲ್ಲಿ ಸರಿಪಡಿಸುವೆ.

2-4-1984

ಕೆ. ನಾಗರಾಜರಾವ್
ಲೇಖಕ

# ವಿಷಯ ಸೂಚಿ

ಗಳಲ್ಲಿ ರತ್ನಗಳ ಪ್ರಾಧಾನ್ಯ, ರತ್ನಗಳ ಹೆಸರು, ವರ್ಣ, ರಾಸಾಯನಿಕ ಸಂಯೋಜನೆ, ಘಡಸು, ಸಾಪೇಕ್ಷಸಾಂದ್ರತೆ, ಲಿಂಗ, ಆಂಗ್ಲ ಭಾಷೆಯಲ್ಲಿ ಹೆಸರುಗಳು, ಪಂಚತತ್ವಗಳು ಮತ್ತು ರತ್ನಗಳು.

ನವರತ್ನ ವರ್ಣ, ಗುಣ, ರೋಗ ನಿವಾರಿಸುವ ಕ್ರಿಯೆ, ಸೇವಿಸಬೇಕಾದ ಪ್ರಮಾಣ ವಿಶಿಷ್ಟ ಯೋಗ.

**14. ಸಪ್ತಧಾತು–ಸಪ್ತವರ್ಣಮಯ ಶರೀರ ಮತ್ತು ರತ್ನಗಳು** 86

ಸಪ್ತಧಾತುಗಳ ವಿವರಣೆ ಮತ್ತು ಉತ್ಪತ್ತಿ, ಶರೀರದ ಸ್ಥೂಲತ್ವ, ದ್ರವತ್ವ, ಉಷ್ಣತ್ವ, ಸೂಕ್ಷ್ಮತ್ವ, ವಿರಲತ್ವ ಮತ್ತು ಸುಶಿರತ್ವ ಇವುಗಳಿಗೆ ಕಾರಣ, ತೇಜಸ್ಸು ಓಜಸ್ಸುಗಳ ನಾಶ, ಶರೀರದ ನಾಶ, ವಾತಪ್ರಕೋಪದಿಂದುಂಟಾಗುವ ರೋಗಗಳು, 80 ಪಿತ್ತಪ್ರಕೋಪದಿಂದುಂಟಾಗುವ ರೋಗಗಳು. 40 ಕಫಪ್ರಕೋಪದಿಂದ ಉಂಟಾಗುವ ರೋಗಗಳು, 20 ಯೋಗಶ್ಯಾಸ್ತ್ರರೀತ್ಯ ಶರೀರದ ವಿವರಣೆ, ಸ್ಥೂಲ, ಸೂಕ್ಷ್ಮ, ಚಿತ್, ಅಂತಸ್ಫೂರ್ತಿ, ಬುದ್ಧಿ, ಭೌದಿಕ, ಆಧ್ಯಾತ್ಮ ಎಂಬ ಸಪ್ತತತ್ವಮಯ ಶರೀರ, ಆರೋಗ್ಯವಂತ ಮಾನವನಲ್ಲಿ ಸುಣ್ಣ, ಕಬ್ಬಿಣ, ಕೊಬ್ಬು ರಂಜಕ, ಇಂಗಾಲ ಮುಂತಾದ ಅಂಶಗಳೆಷ್ಟು ? ಶರೀರದ ರಚನೆ ಕಣಗಳಿಂದ, ಕಣಗಳ ಸೃಷ್ಟಿ, ವಿನಾಶಕ್ರಿಯೆ, ಶರೀರದಲ್ಲಿ ಅಣುಸ್ವರೂಪವುಳ್ಳ ರಾಸಾಯನಿಕ ವಸ್ತುಗಳು, ಶರೀರದ ಬೀಜಾಣುವಿನಲ್ಲಿ ಪ್ರೋಟ್ರಾನ್, ನ್ಯೂಟ್ರಾನ್ ಕಾರ್ಯಾಚರಣೆಗೂ ಸೌರವ್ಯೂಹ ಹಾಗೂ ಅದರ ಸುತ್ತಲೂ ತಿರುಗುತ್ತಿರುವ ಗ್ರಹಗಳ ಚಲನೆಗೂ ಇರುವ ಸಾಮ್ಯ, ಪಂಚ ಮಹಾತತ್ವಗಳು, ಶರೀರ ಹೊರಗೂ ಒಳಗೂ ಇರುವುದು, ಸಪ್ತ ವರ್ಣಮಯ ಶರೀರ, ವಾಗ್ಭಟನ ವಿವರಣೆ, ಅದಕ್ಕೂ ಹಿಂದೆಯೇ ಶರೀರದ ವರ್ಣಪ್ರಭೆ ಕುರಿತು ಯೋಗವಿದ್ಯಾ, ಸಂಹಿತ ಪುರಾಣಗಳಲ್ಲಿ ವಿವರಣೆ, ವಿಶ್ವದ ಜೀವದಾತ ಸೂರ್ಯ, ಸೂರ್ಯನಿಂದ ವರ್ಣಕಿರಣಗಳ ಬಿಡುಗಡೆ, ವರ್ಣಕಿರಣಗಳನ್ನು ಔಷಧಿರೂಪಕ್ಕೆ ಪರಿವರ್ತಿಸುವುದು? ವರ್ಣಮಯ ಶರೀರ ಪ್ರತಿಪಾದನೆ, ಸ್ವಾಮಿ ಮುಕ್ತಾನಂದ ಪರಮಹಂಸರ ಪ್ರಕಾರ ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ ಶರೀರದ ವರ್ಣಗಳು, ಜೀವಾತ್ಮನ ಜ್ಯೋತಿರ್ಮಯವಾದ ನಾಲ್ಕು ಶರೀರಗಳು, ಅವುಗಳ ಸ್ಥಾನ, ಅವಸ್ಥೆ, ಪ್ರಮಾಣ ವರ್ಣಸೂಚಿಸುವ ಪಟ್ಟಿ, ಶರೀರದಲ್ಲಿರುವ ಚಕ್ರಗಳ ಸ್ಥಾನ, ತತ್ವ, ವರ್ಣ, ಕರಣ ಸಂಖೆ , ಸಂಬಂಧಿಸಿದ ಗ್ರಹ ಮತ್ತು ರತ್ನ ಸೂಚಿಸುವ ಪಟ್ಟಿ.

ಶರೀರದ ಮೂಲ ಕಿರಣಗಳಿಗೂ ರಾಶಿಚಕ್ರಕ್ಕೂ ಇರುವ ಸಂಬಂಧ, ಇಡಾಪಿಂಗಳ ಸುಷುಮ್ನಾ ನಾಡಿಗಳ ವರ್ಣಗಳು, ನಾಡಿಗಳ ವಿವರಣೆ ಚಿತಿಕಿರಣಗಳು ಶರೀರದಿಂದ ಪ್ರಸರಿಸುವ ಬಗ್ಗೆ ಸ್ವಾಮಿ ಮುಕ್ತಾನಂದ ಪರಮಹಂಸರ ಅನುಭವ, ಧ್ಯಾನಾಸಕ್ತದಲ್ಲಿ ರಕ್ತಜ್ಯೋತಿದರ್ಶನ, ರಕ್ತಶ್ವೇತ, ಕೃಷ್ಣ, ಪೀತ ಜ್ಯೋತಿಗಳ ಬಗ್ಗೆ ಶ್ರೀ ತುಕರಾಮ ಮಹಾರಾಜರು, ಶರೀರ ವರ್ಣ ಪ್ರಭೆಗಳ ಬಗ್ಗೆ ಟಿಬೆಟ್‌ನ ಖ್ಯಾತ ಯೋಗಿ ಟಿ. ಲೋಬ್ ಸಾಂಗ್ ರಂಪನ ವಿವರಣೆ ಆಧುನಿಕ ವರ್ಣ

ಗ್ರಹ ಯಾವ ರೀತಿ ರೋಗವುಂಟುಮಾಡುವುದು, ಮಂತ್ರೇಶ್ವರನ ಫಲದೀಪಿಕಾ ಗ್ರಂಥದಲ್ಲಿ 6, 8 ಭಾವಸ್ಥಿತ ಗ್ರಹಗಳಿಂದ ಬರುವ ರೋಗಗಳು, ಗ್ರಹ ಸಂಯೋಗದಿಂದ ರೋಗಗಳು, ಹಲವು ಯೋಗಗಳಿಂದ ರೋಗ, ವಿಶಿಷ್ಟ ಸ್ಥಿತಿಯ ಗ್ರಹಗಳಿಂದ ರೋಗಗಳು, 20 ರೋಗ ನಿವಾರಣೆಗೆ ರತ್ನರಸಾಯನ, ರತ್ನಕಿರಣಗಳನ್ನು ಸೆರೆ ಹಿಡಿಯುವ ವಿಧಾನ, ರತ್ನಗುಟಿಕಾ ತಯಾರಿಸುವ ಕ್ರಮ, ಯಾವ ರತ್ನದ ಗುಳಿಗೆಯಿಂದ ಎಂತಹ ರೋಗ ಗುಣವಾಗುವುದು, ರತ್ನ ಗುಳಿಗೆಗಳ ವೈಶಿಷ್ಟ್ಯ, ಬಡವರ ಸಂಜೀವಿನಿ ಖ್ಯಾತ ಜ್ಯೋತಿಷಿ ಚಾರ್ಪಿರವರ ರೋಗ ನಿವಾರಣೆಗೆ ರತ್ನಸಲಹೆ, ರತ್ನ ಧರಿಸಲು ಲಗ್ನ ಆಧಾರವುಳ್ಳ ರತ್ನವೇ ಸರ್ವಶ್ರೇಷ್ಠ ಪಂ. ಗೋಪೇಶ್‌ಕುಮಾರ್ ಓಝುರವರು ರತ್ನ ಧರಿಸಲು ಕೊಟ್ಟಿರುವ ಸಲಹೆ – ಗಮನಿಸಬೇಕಾದ ವಿಚಾರಗಳು, ರತ್ನದ ಬೆಲೆ ನಿರ್ಧರಿಸಲು ಕ್ರಮ, ರತ್ತಿ, ಕ್ಯಾರೆಟ್ ಮಿಲಿಗ್ರಾಂಗಳಲ್ಲಿ ರತ್ನದ ತೂಕ ಹೇಗೆ, ಸಂಖ್ಯಾಶಾಸ್ತ್ರ ರೀತ್ಯ ರತ್ನವನ್ನು ಆ ತೂಕದಲ್ಲಿ ಧರಿಸುವ ಸಲಹೆ, ನಮ್ಮ ಅನುಭವಸಿದ್ಧ ರತ್ನಸಲಹೆ, "ರತ್ನ" ಪದದ ಪ್ರಯೋಗಾರ್ಥ, ಅಷ್ಟಾಂಗ ಹೃದಯದಲ್ಲಿ ರತ್ನದ ಗುಣಪ್ರಸ್ತಾಪ, ಮಹಾ ಮೃತ್ಯುಂಜಯ ಜಪ ಮತ್ತು ನವಗ್ರಹ ಪೀಡಾ ಪರಿಹಾರ ಸ್ತೋತ್ರಗಳು ಮಂಗಳ.

—o—

# ಪುರಾಣ ಇತಿಹಾಸಗಳಲ್ಲಿ ಮುತ್ತು, ರತ್ನ – 1



**ನಾನಾ ರತ್ನಗಳ ಆಭರಣ ಭೂಷಿತೆ ಕಂಠದಲ್ಲಿ ಮುತ್ತುಗಳ ಹಾರ, ಭಾರತೀಯ ಮಹಿಳೆ ಎಷ್ಟು ಆಭರಣಗಳ ಪ್ರಿಯಳು ಎಂಬುದನ್ನು 10ನೇ ಶತಮಾನಕ್ಕೆ ಸೇರಿದ ರಾಜಫುರ್ (ಅಳ್ವಾರ್) ನ ಈ ಚಿತ್ರ ತೋರ್ಪಡಿಸುತ್ತದೆ.**

ನವರತ್ನಗಳು ನಮ್ಮ ಮೇಲೆ ಪ್ರಭಾವ ಬೀರಬಲ್ಲವು : ರತ್ನಗಳು ನಮ್ಮ ರೋಗಗಳನ್ನು ನಿವಾರಿಸಬಲ್ಲವು : ರತ್ನಗಳು ನಮಗೆ ಭಾಗ್ಯ ತರಬಲ್ಲವು ಇಲ್ಲವೇ ದರಿದ್ರನನ್ನಾಗಿಮಾಡಬಲ್ಲವು; ರತ್ನದಿಂದ ಪದವಿ, ಗೌರವ ಇಲ್ಲವೆ ಬೀದಿಭಿಕಾರಿತ್ವ, ಶತ್ರುತ್ವ. ರತ್ನಗಳುಳ್ಳವನಲ್ಲಿ ಆಕರ್ಷಣೆ, ವಾಕ್‌ಸಿದ್ಧಿ ಮತ್ತು ಭೂತಭಯ ನಿವಾರಣೆ–ಇತ್ಯಾದಿ ವಿಚಾರಗಳು ಪೌರಾತ್ಯ ಮತ್ತು ಪಾಶ್ಚಾತ್ಯ ಗ್ರಂಥಗಳಲ್ಲಿಯೂ, ಓಲೆಗರಿಗಳಲ್ಲಿಯೂ ಪ್ರಸ್ತಾಪಿಸಲ್ಪಟ್ಟಿದೆ. ಯಾವುದೇ ಒಂದು ಮೂಲ ಎಲ್ಲ ಅನುಮಾನಗಳಿಗೂ ಉತ್ತರ ನೀಡದು, ಕೆಲವೊಂದು ಪಾಶ್ಚಾತ್ಯ ಗ್ರಂಥಗಳಂತೂ ಸರಿಯಾದ ಆಧಾರವಿಲ್ಲದೆ ಭಾರತೀಯ ವಿಚಾರಧಾರೆಗೆ ವಿರೋಧ ರೀತಿಯಲ್ಲಿ ವರ್ಣಿಸಲ್ಪಟ್ಟಿರುವುದೂ ಉಂಟು. ಆದರೂ ವಿಶ್ವಾದ್ಯಂತ ಈ ರತ್ನಗಳ ಪ್ರಯೋಗ, ಪ್ರಯೋಜನ ಮತ್ತು ವಿಮರ್ಶೆಗಳು ನಡೆಯುತ್ತಲೇ ಇವೆ.

ವಿಷಯ ಬಾಹುಳ್ಯವಿರುವ ಈ ರತ್ನಗಳ ರಹಸ್ಯವನ್ನು ಶಾಸ್ತ್ರಾಧಾರ, ಪ್ರಯೋಗಿಕ ವಾಸ್ತವಿಕತೆ, ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆ, ವೈಜ್ಞಾನಿಕ ಓರೆಗಲ್ಲುಗಳ ಆಧಾರದ ಮೇಲೆ ಹಾಗೂ ನನ್ನ ಸ್ವಾನುಭವಕ್ಕೆ ಬಂದ ಸಂಗತಿಗಳ ಮೇಲೆ ಸಂಕ್ಷಿಪ್ತ ರೀತಿಯಲ್ಲಿ ಚಿತ್ರಿಸಲಾಗಿದೆ.

ನಮ್ಮ ದೇಶದ ಪುರಾಣ ಗ್ರಂಥಗಳಲ್ಲೂ, ದೈವೀಕ ಗ್ರಂಥಗಳಲ್ಲೂ, ವೈದ್ಯ ಗ್ರಂಥಗಳಲ್ಲೂ, ರತ್ನಗಳ ಮಹತ್ವ ಪ್ರಯೋಗ ಹಾಗೂ ವೈಶಿಷ್ಟ್ಯಗಳನ್ನು ವಿವರಿಸಲಾಗಿದೆ, ರತ್ನಗಳ ಬಳಕೆ ಇಂದು ನಿನ್ನೆಯದಲ್ಲ, ಅನಾದಿಯಿಂದ ಒಂದದ್ದು ದೇವಾನುದೇವತೆಗಳಿಗೂ ರತ್ನಗಳ ಮೇಲಿನ ವ್ಯಾಮೋಹ ತಪ್ಪಿದ್ದಲ್ಲ, ಹಾಗೆಂದ ಮೇಲೆ ಸಾಮಾನ್ಯ ಮಾನವರಿಗೆಂದು ಈ ಆಸೆಯಿಂದ ಬಿಡುಗಡೆ ?



ಕೌಸ್ತುಭ ಮಣಿಧಾರಿ ಶ್ರೀ ಲಕ್ಷ್ಮೀನಾರಾಯಣ

ಶ್ರೀಮನ್ನಾರಾಯಣ ಕೌಸ್ತುಭಮಣಿಧಾರಿ, ವಿದ್ಯಾಭಿಮಾನಿಯಾದ ಸರಸ್ವತಿ ಮುತ್ತಿನಹಾರ ಧರಿಸಿದವಳು, ಮತ್ತು ಸ್ಫಟಿಕಮಣಿಯ ಹಾರವನ್ನು ತನ್ನ ಕೈಯಲ್ಲಿ ಹಿಡಿದಿರುವಳು. ತ್ರಿಕಾಲವಲ್ಲೂ ಧ್ಯಾನಿಸಲ್ಪಡುವ ಗಾಯತ್ರೀ ಮಾತೆ ಮುಕ್ತಾ ವಿದ್ರುಮ ಸುವರ್ಣ ಆಭರಣಭೂಷಿತಳು, ಮಧುರೆ ಮೀನಾಕ್ಷಿ, ಕಂಚಿ ಕಾಮಾಕ್ಷಿದೇವಿ ಕನ್ಯಾಕುಮಾರಿಯ ಮೂಗುತಿಯ ವಜ್ರದ ವೈಭವವಂತೂ ಹೇಳತೀರದು. ಭೂ ವೈಕುಂಠಾಧಿಪತಿಯಾದ ತಿರುಪತಿ ವೆಂಕಟೇಶ ಧರಿಸುವ ಅತ್ಯಮೂಲ್ಯ ಪಚ್ಚೆ ಯಾರಿಗೆ ಕಾಣಿಸದು !

ಲಲಿತಾ ಸಹಸ್ರನಾಮದಲ್ಲಿ ದೇವಿಯ ಕಪೋಲಗಳು ಪದ್ಮರಾಗ ಶಿಲೆ ತಿರಸ್ಕರಿಸುವಷ್ಟು ಪ್ರಕಾಶವಾನವಾದವ್ಹೆಂದೂ ದೇವಿಯ ಮೂಗುತಿ ನಕ್ಷತ್ರ

ಕಾಂತಿಗಿಂತಲೂ ಮೀರಿದ ಕಾಂತಿ ಹೊಂದಿರುವುದೆಂದೂ ಹಯಗ್ರೀವರಿಂದ ವರ್ಣಿಸಲ್ಪಟ್ಟಿದೆಯಲ್ಲವೆ.

ಶ್ರೀ ಶಂಕರಾಚಾರ್ಯರು ತಮ್ಮ **"ಸೌಂದರ್ಯ ಲಹರಿ"** ಗ್ರಂಥದಲ್ಲಿ ದೇವಿಯ ಮಹಿಮೆಯನ್ನು ವಿವರಿಸುವುದರಲ್ಲಿ ತಲ್ಲೀನರಾಗಿ ಪ್ರಳಯ ಕಾಲದ ಉತ್ಪತ್ತಿ, ಸ್ಥಿತಿ ಲಯಗಳು ಸರ್ವೇಶ್ವರಿಯ ಓಲೆಗಳಿಂದುಂಟಾಗುವುದು ಎಂದು ಹೇಳಿದ್ದಾರೆ, ಅಂದಮೇಲೆ ಆ ಓಲೆಯಲ್ಲಿರುವ ರತ್ನಗಳ ಮಹತ್ವ ಎಷ್ಟರಮಟ್ಟದ್ದು. ವರಕವಿ ಕಾಳಿದಾಸ ಭಕ್ತಿ ಪರವಶನಾಗಿ ದೇವಿಯ ದರ್ಶನ ಪಡೆದು ಸ್ತುತಿಸಿದ "ಶ್ಯಾಮಲಾದಂಡಕ" ದಲ್ಲಿ ದೇವಿಯನ್ನು ಉದ್ದೇಶಿಸಿ **"ಸುರಿಚಿರ ನವರತ್ನ ಪೀಠಸ್ಥಿತೇ ರತ್ನ ಪದ್ಮಾಸನೇ ರತ್ನ ಸಿಂಹಾಸನೇ"** ಎಂದು ವರ್ಣಿಸಿದ್ದಾನೆ, ಇಲ್ಲಿ ನವರತ್ನಗಳ ಪ್ರಾಶಸ್ತ್ಯವುಂಟಲ್ಲವೇ ?

ಮಹಾಭಾರತಕ್ಕೆ ಸಂಬಂಧಿಸಿದ ಒಂದು ಕಥೆ, ಪ್ರಸೇನನು ಸೂರ್ಯ ದೇವನನ್ನು ಪ್ರಾರ್ಥಿಸಿ ದಿನಕ್ಕೆ 8 ಭಾರ ಚಿನ್ನ ಕೊಡುವಂತಹ ಶ್ಯಮಂತಕ ಮಣಿಯನ್ನು ಪಡೆದ, ಶ್ರೀ ಕೃಷ್ಣನಿಗೆ ಇದರ ಸಂಬಂಧದಲ್ಲಿ ಮಿಥ್ಯ ಅಪವಾದ ಮತ್ತೆ ನಿವಾರಣೆ. ಈ ಮಣಿಯು ದರಿದ್ರ ಕ್ಷಾಮಗಳನ್ನು ನಿವಾರಿಸಿದ ಕಥೆ **"ವ್ರತರತ್ನಮಾಲಾ"** ಗ್ರಂಥದಲ್ಲಿದೆ.

ಇನ್ನೊಂದು ಶಕುಂತಲೆಯ ಕಥೆ, ರಾಜ ದುಷ್ಯಂತ ಶಕುಂತಲೆಯನ್ನು ವರಿಸಿ ಗಾಂಧರ್ವ ವಿವಾಹವಾಗಿ ತನ್ನಲ್ಲಿದ್ದ ಮುದ್ರೆಯುಂಗುರವನ್ನಿತ್ತು ತನ್ನಲ್ಲಿಗೆ ಬರುವಂತೆ ಹೇಳಿ ಹೊರಟುಹೋದ, ಉಂಗರ ಕಳೆದುಕೊಂಡ ಶಕುಂತಲೆ ದುಷ್ಯಂತನಿಂದ ದೂರವಾದಳು, ಮತ್ತೆ ಆ ಉಂಗುರವನ್ನು ದೃಷ್ಟಿಸಿದಮಾತ್ರದಿಂದ ತನ್ನ ಹೆಂಡತಿ ಶಕುಂತಲೆಯೆಂದು ಜ್ಞಾಪಿಸಿಕೊಂಡ, ಆ ಉಂಗುರದಲ್ಲಿ ಅಳವಡಿಸಿಟ್ಟ ರತ್ನವೆಂತಹುದೋ ?

ಮುದ್ರೆಯುಂಗುರ ತೋರಿ ಲಂಕೆಯಲ್ಲಿದ್ದ ಸೀತಾದೇವಿಗೆ ತಾನು ರಾಮ ಭಕ್ತ ಹಾಗೂ ರಾಮದೂತನೆಂದು ಪ್ರತಿಪಾದಿಸಿ ಸಮರ್ಥಿಸಿಕೊಂಡ ಹನುಮಂತನ ಕಥೆ ಯಾರಿಗೆ ತಿಳಿಯದು ? ರತ್ನಗಳಿಗೆ ಸಂಬಂಧಿಸಿದಂತೆ ಇಂತಹ ಇನ್ನೂ ಅನೇಕ ಕಥೆಗಳು ಸಹಸ್ರಾರು.

ಭಾರತದ ಇತಿಹಾಸದಲ್ಲೇ ಅತ್ಯಂತ ಮಹತ್ವಪೂರ್ಣ ಸ್ಥಾನ ಪಡೆದ ರತ್ನ **"ಕೋಹಿನೂರ್"** ಸುಮಾರು 800 ಕ್ಯಾರೆಟ್ ಇದ್ದ ಈ ವಜ್ರ ಲಕ್ಷ್ಮೀಪ್ರದವಾಗಿತ್ತು, ಇದನ್ನು ಹೊಂದಿದವರು ವಿಶ್ವವನ್ನೇ ಆಳುವರು ಎಂಬ ಭಾವನೆ




ನವರತ್ನಗಳು

ಇತ್ತು, ಶ್ರೀನಗರದಿಂದ ಮೊಗಲ್ ಆಳ್ವಿಕೆಗೆ ಸಿಕ್ಕಿ ಬ್ರಿಟಿಷರ ರಾಜಮನೆತನದ ವಶವಾಗಿ ಈವಿಗೂ ಅವರಲ್ಲಿಯೇ ಉಳಿದಿದೆ. ಇಂದು ಅದು 80 ಕ್ಯಾರೇಟ್‌ನಷ್ಟು ಮಾತ್ರವಿದೆ. ಆದರೂ ಇದರ ಬೆಲೆ ಸುಮಾರು ಒಂದು ಲಕ್ಷ ಪೌಂಡುಗಳಿಗೂ ಹೆಚ್ಚಾಗಬಹುದೆಂದು ಅಂದಾಜು.

ಮೊಗಲ್ ದೊರೆ ಷಹಜಹಾನ್ ತನ್ನ ಮಯೂರ ಸಿಂಹಾಸನದಲ್ಲಿ ಅಲಂಕರಿಸಿದ್ದ 249 ಕ್ಯಾರೇಟ್ ರತ್ನ ರಷ್ಯದ ಜಾರ್ ಚಕ್ರವರ್ತಿಗಳ ವಶವರ್ತಿಯಾಗಿ ಇಂದು ಮಾಸ್ಕೋ ನಗರದಲ್ಲಿದ್ದು "ಅರ್ಲಾಫ್" ಎಂದು ಪ್ರಸಿದ್ಧಿ ಪಡೆದಿದೆ.

ಫ್ರೆಂಚ್ ದೇಶದ ದೊರೆ 15ನೇ ಲೂಯಿ, ವಿಶ್ವ ವಿಖ್ಯಾತ ವೀರ ನೆಪೋಲಿಯನ್ ಬೊನಪಾರ್ಟೆ, ರಷ್ಯ ದೇಶದ ಕ್ಯಾಥರೀನ್-ಇವರೆಲ್ಲ ರತ್ನಗಳಲ್ಲಿ ವಿಶೇಷ ಆಸಕ್ತಿ ಹೊಂದಿದವರು, ರತ್ನಗಳಿಗಾಗಿ ರಕ್ತಪಾತ, ರಾಜ್ಯನಷ್ಟ ಯುದ್ಧಗಳುಂಟಾಗಿರುವ ಹಲವಾರು ನಿದರ್ಶನಗಳು ವಿಶ್ವ ಚರಿತ್ರೆಯ ಪುಟಗಳಲ್ಲಿ ಉಂಟು.

ರತ್ನಗಳ ಪ್ರಯೋಗ, ಫಲಗಳ ವಿಮರ್ಶೆ, ಪರೀಕ್ಷೆ-ಇತ್ಯಾದಿ ವಿವರಣೆ ನೀಡಲು ನಮ್ಮ ದೇಶದಲ್ಲಿ ಕಂಡುಬರುವ ಗ್ರಂಥಗಳು-ಅಗ್ನಿ ಪುರಾಣ, ಸ್ಕಾಂದ ಪುರಾಣ, ವಾಗ್ಭಟಾಚಾರ್ಯರ "ಅಷ್ಟಾಂಗ ಹೃದಯ" ವರಾಹಮಿಹಿರಾಚಾರ್ಯರ ಬೃಹತ್ಸಂಹಿತಾ, ಮುಹೂರ್ತ ಚಿಂತಾಮಣಿ, ಅಗಸ್ತ್ಯ ಋಷಿಯ "ರತ್ನ ಶಾಸ್ತ್ರ".



'ಬೃಹತ್ಸಂಹಿತಾ' ಗ್ರಂಥಕರ್ತ ವರಾಹಮಿಹಿರ

ರಸವಾದ ತರಂಗಿಣಿ, ರಸಪ್ರದೀಪಿಕ, ಭೋಜರಾಜನ "ಯುಕ್ತಿಕಲ್ಪತರು" ಮತ್ತು ಇತರ ಆಯುರ್ವೇದ ಹಾಗೂ ಜ್ಯೋತಿಷ್ಯ ಶಾಸ್ತ್ರಗ್ರಂಥಗಳು ಇವಲ್ಲದೆ ರಸವಾದ ಸಂಬಂಧಿತವಾದ ಕೆಲವು ಆರ್ಷೇಯ ಓಲೆಗರಿಯ ಪ್ರತಿಗಳು, ಅಲ್ಲಿ ಇಲ್ಲಿ ಸಿಗುವವು. ಈ ಸಂಬಂಧವಾದ ಪಾಶ್ಚಾತ್ಯ ವಿಮರ್ಶೆಯ ಗ್ರಂಥಗಳೂ ಅನೇಕವುಂಟು.

## ರತ್ನೋತ್ಪತ್ತಿ

ವರಾಹಮಿಹಿರಾಚಾರ್ಯರು ತಮ್ಮ "ಬೃಹತ್ಸಂಹಿತೆಯಲ್ಲಿ" ರತ್ನಗಳು ಬಲನಾಮ ರಾಕ್ಷಸನಿಂದ ಉತ್ಪತ್ತಿಯಾಯಿತೆಂದೂ ಮತ್ತೆ ಕೆಲವರು ದಧೀಚಿ ಮುನಿಯ ಅಸ್ಥಿ (ಮೂಳೆಗಳಿಂದ) ಯಿಂದ ಉಂಟಾಯಿತೆಂದೂ ಹೇಳುತ್ತಾರೆ. ಆದರೆ ಭೂಮಿಯ ಕೆಲವು ಸ್ವಾಭಾವಿಕ ಲಕ್ಷಣದ ಭಿನ್ನತೆಯೇ ರತ್ನೋತ್ಪತ್ತಿಗೆ ಕಾರಣ. ಕೆಲವು ರೀತಿಯ ರತ್ನಗಳು ನದಿಗಳ ತೀರದಲ್ಲೂ, ಮುತ್ತುಗಳು ಒಂದು ಜಾತಿಯ ಸಮುದ್ರದ ಮೀನುಗಳಿಂದಲೂ ಉತ್ಪತ್ತಿಯಾಗುತ್ತವೆ. ರತ್ನದ ಗಣಿಗಳಿಂದಲೇ ಹೆಚ್ಚಾಗಿ ರತ್ನಗಳು ದೊರೆಯುತ್ತವೆ. ವರಾಹಸಂಹಿತೆಯ ರೀತ್ಯ ರತ್ನಗಳು ಸಿಗುವ ಸ್ಥಳಗಳು :— ವೇಣಾನದಿಯದಡ, ಕೋಸಲ, ಸೌರಾಷ್ಟ್ರ, ಹಿಮವತ್ ಪರ್ವತದ ತಪ್ಪಲು, ಕಳಿಂಗ, ಮತಂಗ, ಪಲ್ಲ, ಸೌರ, ಪೌರ ಮತ್ತು

ಪೌಂಡ್ರ ರಾಷ್ಟ್ರಗಳು. ಬೇರೆ ಬೇರೆ ರೀತಿಯ ರತ್ನಗಳು ಹೇರಳವಾಗಿ ದಕ್ಷಿಣ ಆಫ್ರಿಕಾ, ಕಾಂಗೋ, ಆಸ್ಟ್ರಿಯ, ಸಿಲೋನ್, ಬರ್ಮ, ಚೈನಾ ಮತ್ತು ಮಧ್ಯ ಭಾರತದಲ್ಲಿ ಸಿಗುತ್ತವೆ. ನೈಜ ಅಥವಾ ಸ್ವಾಭಾವಿಕ ರತ್ನಗಳಲ್ಲದೆ ಕೃತಕ ರತ್ನಗಳನ್ನು ರಾಸಾಯನಿಕ ಕ್ರಿಯೆಯಿಂದ ಉತ್ಪತ್ತಿ ಮಾಡಲು ಸಾಧ್ಯವಿದೆ.

## ನವರತ್ನಗಳು : ಹೇಗೆ ವೈಜ್ಞಾನಿಕ? ಹೇಗೆ ವೈದ್ಯಕೀಯ ? – 2



ರತ್ನಗಳಲ್ಲಡಗಿದೆ – ಆಕರ್ಷಣ ಶಕ್ತಿ, ವ್ಯಾಧಿ ವಿನಾಶನಾ ಶಕ್ತಿ ಮತ್ತು ಸಂರಕ್ಷಣಾ ಶಕ್ತಿ ರತ್ನಗಳು–ಜ್ಞಾನ, ಬುದ್ಧಿ ಮತ್ತು ಸಂಪದಭಿವೃದ್ಧಿ ಮಾಡಬಲ್ಲವು! ರತ್ನಗಳಿಂದ – ಸೌಭಾಗ್ಯ ! ವಿಶ್ವಾದ್ಯಂತ ಈ ರೀತಿ ಅನೇಕ ಹೇಳಿಕೆಗಳು. ಹಾಗಾದರೆ ಈ ರತ್ನಗಳಲ್ಲಿ ಅಡಗಿರುವ ಅವ್ಯಕ್ತ ವಿಶಿಷ್ಟ ಶಕ್ತಿ ಯಾವುದೊ ಇರಲೇಬೇಕು. ಅದನ್ನು ವೈಜ್ಞಾನಿಕ ರೀತ್ಯ ಕೃತಪಡಿಸಲು ಸಾಧ್ಯವೇ? ಹೌದು, ಸಾಧ್ಯ.

ನೈಸರ್ಗಿಕವಾಗಿ ಲಭಿಸುವ ಅಥವಾ ಸ್ವಾಭಾವಿಕವಾಗಿ ಸಿಗುವ ರತ್ನಗಳೂ ಕಲ್ಲುಗಳೇ. ವಿವಿಧ ರತ್ನಗಳಲ್ಲಿ ವಿವಿಧ ಲೋಹ ಹಾಗೂ ರಾಸಾಯನಿಕ ವಸ್ತುಗಳು ಹರಳುಗಳ ರೂಪದಲ್ಲಿ ಸಂಯೋಜಿತಗೊಂಡಿವೆ. ಭೂಗರ್ಭದ ರಾಸಾಯನಿಕ ಬದಲಾವಣೆಗಳಿಂದ ಉತ್ಪತ್ತಿಯಾಗುವ ರತ್ನಗಳ ವರ್ಣಭೇದಗಳಿಂದ ಬೇರೆ ಬೇರೆ ರೂಪದಲ್ಲಿ ಬೇರೆ ಬೇರೆ ಗುಣಮಟ್ಟದಿಂದ ಹೊರಬೀಳುವುದು.

ವರಹಮಿಹಿರಾಚಾರ್ಯರ "ಬೃಹತ್ಸಂಹಿತೆ" 22 ವಿವಿಧ ರತ್ನಗಳಿವೆ ಎಂದು ತಿಳಿಸುತ್ತದೆ.

**ಸೌಗಂಧಿಕ ಗೋಮೇಧಕ ಶಂಖಮಹಾನೀಲ ಪುಷ್ಪರಾಖ್ಯಾಃ ।**
**ಬ್ರಹ್ಮಮಣಿ ಜ್ಯೋತಿರಸಸ್ಯಕ ಮುಕ್ತ ಪ್ರವಾಳಾನಿ ॥**

ಅಂದರೆ ವಜ್ರ, ಇಂದ್ರನೀಲ, ಮರಕತ, ಕರ ಕೇತನ ಕೆಂಪು, ರುಧಿರ, ವೈಡೂರ್ಯ, ಪುಲಕ, ವಿಮಲಕ, ರಜಮಣಿ, ಸ್ಫಟಿಕಮಣಿ, ಜ್ಯೋತಿ ರಸ, ಸಸ್ಯಕ, ಮುಕ್ತ, ಪ್ರವಾಳ, ಚಂದ್ರ ಕಾಂತ, ಸೌಗಂಧಿಕಾ, ಗೋಮೇಧ, ಶಂಖ, ಮಹಾ ನೀಲ ಮತ್ತು ಪುಷ್ಪರಾಗ ಎಂಬುದಾಗಿ ಈ ಪಟ್ಟಿಯ ಪ್ರಕಾರ ನವರತ್ನಗಳಲ್ಲದೇ ಉಪರತ್ನಗಳೂ ಸೇರಿಸಲ್ಪಟ್ಟಿವೆಯೆಂದು ಅರ್ಥ ಬರುವುದು.

ನವರತ್ನಗಳು ಎಂದರೆ ಒಂಭತ್ತು ಮಾತ್ರ. "ರಸಪ್ರದೀಪಿಕ" ಎಂಬ ಆಂಧ್ರ ಗ್ರಂಥದಲ್ಲಿ ನವರತ್ನಗಳು ಯಾವುವು ಎಂಬುದಕ್ಕೆ :–

" ವಿನುಮು ಮಾಣಿಕ್ಯ ಮೌಕ್ತಿಕವಿದ್ರು ಮಮುಲುಗರುಡ ಪಚ್ಚಯುಂಬುಷ್ಯ ರಾಗಂಬು ವಜ್ರ, ನೀಲ ವೈಡೂರ್ಯ ಗೋಮೇಧ ಕಾಲಸಂಗವೆಲಯು ತೊಮ್ಮಿದಿ ತೊಮ್ಮಿದಿ ನವರತ್ನ ಮುಲುನಟಂಡ್ರು "

ಎಂದಿರುವುದರಿಂದ ಮಾಣಿಕ್ಯ, ಮುತ್ತು, ವೈಡೂರ್ಯ, ಗರುಡಪಚ್ಚೆ, ಪುಷ್ಯರಾಗ, ವಜ್ರ, ನೀಲ, ಗೋಮೇಧಕ ಮತ್ತು ಪ್ರವಾಳ ಇವುಗಳೇ ನವರತ್ನ ಗಳೆಂದು ಪರಿಗಣಿಸಲ್ಪಟ್ಟಿತು.

ತಾಂತ್ರಿಕ ಹಾಗೂ ಆಧ್ಯಾತ್ಮಿಕ ಗ್ರಂಥವಾದ "ಸೌಂದರ್ಯಲಹರಿ" ಯನ್ನು ನಮ್ಮ ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯದವರು ಪ್ರಕಟಿಸಿರುವರು. ಅದರಲ್ಲಿ ಚಿಂತಾಮಣಿ ಗೃಹ ಹಾಗೂ ಶ್ರೀಚಕ್ರವರ್ಣನೆಯಲ್ಲಿ ಶ್ರೀಚಕ್ರದ ಆವರಣ ಪ್ರಾಕಾರಗಳು ನವರತ್ನಗಳಿಂದ ಮಾಡಲ್ಪಟ್ಟಿರುವುದಾಗಿ ವರ್ಣನೆಯಿದೆ ಅವು—

ಪುಷ್ಯರಾಗಮಯಃ ಪದ್ಮರಾಗ ರತ್ನಮಯಃ ಪರಃ ॥
ಗೋಮೇಧಕಸ್ತತೋ ವಜ್ರಪ್ರಾಕಾರಃ ಸ್ಯಾತ್ತತಃ ಪರಃ ।
ವೈಡೂರ್ಯಶ್ಚೇಂದ್ರನೀಲೇನ ಕೃತೋ ಮರಕತಃ ಪರಃ ।
ಮೌಕ್ತಿಕೋ ವ್ರಿದ್ರುಮ ಪ್ರಾಸ್ನ್ಯೋ ನವರತ್ನ ಕೃತಃ ಪರಃ ।
ವಿಚಿತ್ರ ರತ್ನ ಪ್ರಾಕಾರಶ್ಚೇತ್ಯೇಕಾದಶಸುಂದರಿ ॥

ಪುಷ್ಪರಾಗ, ಪದ್ಮರಾಗ, ಗೋಮೇಧಕ, ವಜ್ರ, ವೈಡೂರ್ಯ ಇಂದ್ರನೀಲ ಮರಕತ್ತ ಮುತ್ತು, ಹವಳ ಇವೇ ನವರತ್ನಗಳೆಂದು ಸಮ್ಮತಿಸಿದಂತಾಗುವುದು. ಈ ರತ್ನಗಳು ಮಾನವನ ಮೇಲೆ ಪ್ರಭಾವ ಬೀರಲು ಅವುಗಳಲ್ಲಿರುವ ರಾಸಾಯನಿಕ ವೈಶಿಷ್ಟ್ಯ ವನ್ನು ಇಲ್ಲಿ ಗಮನಿಸಬಹುದು.

**1. ಮಾಣಿಕ್ಯ [RUBY]-**

ಇದಕ್ಕೆ ಪದ್ಮರಾಗವೆಂದೂ ಹೆಸರು. ಇದು ಪರಿಶುದ್ಧ ರೂಪದಲ್ಲಿ ಪಾರಿವಾಳದ ರಕ್ತಬಣ್ಣವನ್ನು ಹೊಂದಿರುತ್ತದೆ. ವಿಶೇಷವಾಗಿ ಅಲ್ಯೂಮಿನ ಮತ್ತು ಸ್ವಲ್ಪಭಾಗ ಕಬ್ಬಿಣದ ಡೈಆಕ್ಸೈಡ್‌ನಿಂದ ಕೂಡಿರುವುದು. ವಿಶೇಷ ಶಾಖಕೆ ವರ್ಣ ಬದಲಾಯಿಸಿದರೂ ಪುನಃ ತನ್ನ ಮಾಮೂಲಿನ ವರ್ಣಕ್ಕೆ ಹಿಂತಿರುಗುವುದು. ಘಡಸು-9. ಸಾಪೇಕ್ಷಸಾಂದ್ರತೆ ಸುಮಾರು 4. ಆಂಗ್ಲಭಾಷೆಯಲ್ಲಿ ಇದು ರೂಬಿ. ಕಿರಿ ಮಂಜಿ ಕೆಂಪು, ಅತಿಕೆಂಪು, ಗುಲಾಬಿ ಕೆಂಪು ಎಂಬ ವರ್ಣಗಳಲ್ಲೂ ಮಾಣಿಕ್ಯ ದೊರಕುವುದು. ಇದನ್ನು ಪುರುಷ ರತ್ನವೆಂದು ಲಿಂಗ ಭೇಧ ಪಡಿಸಿರುವರು. ಬರ್ಮ, ಸಿಲೋನ್, ಸಯಾಂ ದೇಶದಲ್ಲಿ ಉತ್ತಮ ಗುಣದ ಮಾಣಿಕ್ಯಗಳು ದೊರಕುತ್ತವೆ.

**2. ಪುಷ್ಪರಾಗ – [ಪುಷ್ಯರಾಗ] [TOPAZ]**

ಮೂಲವಸ್ತು-ಅಲ್ಯೂಮಿನ ಸಿಲಿಕೇಟ್. ನೀರಿಗಿಂತಲೂ ಭಾರವುಳ್ಳದ್ದು. ಕೆಳಗೆ ಬಿದ್ದರೆ ಒಡೆಯುವುದು ಇಲ್ಲವೇ ಸೀಳು ಬಿಡುವುದು. ಇದರ ಘಡುಸುತನ 8. ಸಾಪೇಕ್ಷ ಸಾಂದ್ರತೆ ಸುಮಾರು 5. ಉತ್ತಮ ಪುಷ್ಯರಾಗಪಾರದರ್ಶಕ ಹಾಗೂ ಹೆಚ್ಚು ಪ್ರಕಾಶವುಳ್ಳದ್ದು. ಹಳದಿ ಬಿಳಿಯ ಸಂಯೋಜಿತ ವರ್ಣದ ಪುಷ್ಪರಾಗ ಶ್ರೇಷ್ಠ ಮಟ್ಟದ್ದು. ಈ ರತ್ನವನ್ನೂ ಪುಲ್ಲಿಂಗಕ್ಕೆ ಸೇರಿಸಿರುವರು. ತಿಳಿ ನೀಲ ತಿಳಿಗೆಂಪು, ಪೂರ್ಣ ಬಿಳಿ, ಮಿಶ್ರಿತ ಪುಷ್ಪರಾಗಗಳೂ ದೊರಕುತ್ತವೆ. ಕೇಸರಿ ವರ್ಣದ ಪುಷ್ಯರಾಗ ಹಾಗೂ ಹಳದಿ ವರ್ಣದ ಪುಷ್ಯರಾಗ ಹೆಚ್ಚು ಬೆಲೆ ಬಾಳುವುದು. ಆಂಗ್ಲ ಭಾಷೆಯಲ್ಲಿ ಇದಕ್ಕೆ "ಟೋಪಾಜ್" ಎಂದು ಹೆಸರು. ಸಿಲೋನ್ ಹಾಗೂ ಪಾಶ್ಚಾತ್ಯ ದೇಶಗಳಲ್ಲಿ ದೊರಕುವುದು.

**3. ಗೋಮೇಧಕ (ಗೋಮೇಧ, ಪಿಂಗಳ ಸ್ಫಟಿಕ) [HESSONITE]**

ಅಲ್ಯೂಮಿನಿಯಂ ಹಾಗೂ ಸುಣ್ಣ ಮಿಶ್ರಣದ ಧಾತುವುಳ್ಳ ಗೋಮೇಧಕ ಇದು ಎಳ್ಳಿನ ಎಣ್ಣೆ ಅಥವ ಜೇನುತುಪ್ಪದ ಬಣ್ಣವನ್ನು ಹೊಂದಿರುತ್ತದೆ. ಇದನ್ನು "ನಪುಂಸಕ ರತ್ನ" ವೆಂದು ಪರಿಗಣಿಸುವರು. ಇದರ ಘಡಸುತನ-2.7. ಸಾಪೇಕ್ಷ ಸಾಂದ್ರತೆ ಸಾಮಾನ್ಯ ಉತ್ತಮ ಮಟ್ಟದಲ್ಲಿ 3.6. ಕೆಲವು ಗೋಮೇಧಗಳು ಹಳದಿ ಕೆಂಪು ಬಣ್ಣವನ್ನು ಹೊಂದಿರುತ್ತದೆ. ಪಾರದರ್ಶಕ ಶಕ್ತಿ ಕಡಿಮೆ. ಆದರೂ ಸುಂದರವಾದದ್ದು. ಸಿಲೋನ್‌ನಲ್ಲಿ ಹೇರಳವಾಗಿ ಸಿಗುವುದು. ಆಂಗ್ಲ ಭಾಷೆಯಲ್ಲಿ ಇದಕ್ಕೆ ಹೆಸ್ಸೋನೈಟ್ ಎಂದು ಹೆಸರು.

## 4. ಪಚ್ಚೆ (ಮರಕತ) (EMERALD)

ಹಸಿರು ವರ್ಣವುಳ್ಳದ್ದು. ಪಾರದರ್ಶಕ. ಘಡುಸು 7.75. ಸಾಪೇಕ್ಷ ಸಾಂದ್ರತೆ 2.73. ಮೇಲಿನಿಂದ ಬಿದ್ದರೆ ಸೀಳುಬಿಡುತ್ತದೆ. ಇದಕ್ಕೆ ಗರುಡಪಚ್ಚೆ, ಮರಕತ. ಪನ್ನ ಮುಂತಾದ ಹೆಸರುಗಳುಂಟು. ಇಂಗ್ಲೀಷ್‌ನಲ್ಲಿ ಇದು "ಎಮರಾಲ್ಡ್" ಇದು ನಪುಂಸಕ ಲಿಂಗದ ರತ್ನವೆನ್ನುವರು. ಉತ್ತಮ ಮಟ್ಟದ ಪಚ್ಚೆ ಅತಿ ಹಸಿರು. ತಿಳಿಹಸಿರಿನ ವಿವಿಧಾಕಾರದ ಪಚ್ಚೆಗಳೂ ಸಿಗುತ್ತವೆ. ಅಲ್ಯೂಮಿನಿಯಂ ಹಾಗೂ ಬೆರಿಲಿಯಂ ಈ ರತ್ನದ ಮೂಲಧಾತು. ಟ್ರ್ಯಾನ್ಸ್‌ವಾಲ್ ಸೈಬೀರಿಯಾ ... ಈಜಿಪ್ಟ್ ದೇಶಗಳಲ್ಲಿ ದೊರಕುವುದು. ಇಂಗ್ಲೆಂಡಿನ ಜನರಿಗೆ ಇದರಲ್ಲಿ ಆಸಕ್ತಿ ಹೆಚ್ಚು ಮತ್ತು ಅಲ್ಲಿ ಬೆಲೆಯೂ ಕಡಿಮೆ.

## 5. ವಜ್ರ-ಹೀರಕ (DIAMOND)

ರತ್ನಗಳಲ್ಲೇ ಅತ್ಯಂತ ಬೆಲೆ ಬಾಳುವುದು ವಜ್ರ. ಇದು ಘನ ಇಂಗಾಲದ ಒಂದು ಅತ್ಯಂತ ಕಠಿಣತೆ ಹೊಂದಿದ ರೂಪ. ಕಿಂಬರ್ಲಿಯ ವಜ್ರಗಳಂತೂ ವಿಶ್ವಾದ್ಯಂತ ಪ್ರಸಿದ್ಧಿ ಪಡೆದಿವೆ. ಶುದ್ಧ ಹಾಗೂ ಶ್ರೇಷ್ಠ ವಜ್ರದ ಘಡಸು-10. ಸಾಪೇಕ್ಷಸಾಂದ್ರತೆ 3.52 ಇದಕ್ಕೆ ಬೆಳಕಿನ ವಕ್ರೀಕರಣ ಹಾಗೂ ಪ್ರತಿಬಿಂಬಿಸುವ ಶಕ್ತಿ ಹೆಚ್ಚು ಆಕರ್ಷಣೆಗೆ ಕಾರಣವಾಗಿದೆ. ಉತ್ಕೃಷ್ಟ ವಜ್ರ ತಿಳಿನೀಲಿ ಹಾಗೂ ಬಿಳಿ ಹೊಳಪಿನ ರತ್ನ ಕಿರಣಗಳನ್ನು ಹೊರಸೂಸುವುದು. ಇದು ಸ್ತ್ರೀಲಿಂಗವೆಂದು ಪರಿಗಣಿಸಲಾಗಿದೆ. ನನ್ನ ಘನಸುತನದಿಂದ ಮತ್ತೊಂದು ವಜ್ರವನ್ನು ಛೇದಿಸ ಬಲ್ಲದು. ವಿದ್ಯುತ್‌ವಾಹಕ ವಿರೋಧಿ. ನಮ್ಮ ದೇಶದ ಆಂಧ್ರಪ್ರದೇಶ ಮತ್ತು ಮಧ್ಯ ಪ್ರದೇಶ ಹಾಗೂ ಗೋದಾವರಿ ನದಿಯ ಸಮೀಪದಲ್ಲಿ ವಜ್ರಗಳು ದೊರಕುತ್ತವೆ.

## 6. ಮುತ್ತು (PEARLS)

ಇದು ನಾನಾ ವರ್ಣಗಳುಳ್ಳದ್ದು. ಇದರ ಘನಸು 3. ಸಾಪೇಕ್ಷ ಸಾಂದ್ರತೆ 2.6. ಇದು ಖನಿಜ ವಸ್ತುವಲ್ಲ. ಒಂದು ಜಾತಿಯ ಮೋಲ್ಸ್ ಎಂಬ ಮೀನಿನಿಂದ ಉತ್ಪತ್ತಿಯಾಗುತ್ತದೆ. ಇದಕ್ಕೆ "ಸ್ಕಲ್‌ಫಿಷ್" ಎಂದೂ ಕರೆಯುವರು. ಇದು ನಾನಾ ವರ್ಣ ಹಾಗೂ ಗಾತ್ರಗಳುಳ್ಳದ್ದು. ಸಮುದ್ರದಿಂದ ದೊರಕುವ ಮುತ್ತುಗಳು ಮೌಕ್ತಿಕಾ ಎಂದು ಕರೆಯಲ್ಪಡುವುದು. ಆಗ್ಲ ಭಾಷೆಯಲ್ಲಿ "ಪರ್ಲ್" ಎನ್ನುವರು. ಇದರ ಘನರೂಪದಲ್ಲಿ ಸುಣ್ಣದ ಕಾರ್ಬೊನೇಟ್ ಮಿಶ್ರಣವಿದೆ. ಇದು ಭಾರತದ ಹಿಂದೂಮಹಾಸಾಗರ ಹಾಗೂ ಪೆಸಿಫಿಕ್ ಸಮುದ್ರಗಳಲ್ಲಿ ಹೇರಳವಾಗಿ ದೊರಕುವುದು. ಸ್ತ್ರೀಲಿಂಗವೆಂದು ಇದು ಪರಿಗಣಿಸಲ್ಪಟ್ಟಿದೆ.

## 7. ನೀಲ-ಇಂದ್ರನೀಲ-ಮಹಾನೀಲ (SAPPHIRE)

ಇದನ್ನು ಬ್ರಹ್ಮ ಸೃಷ್ಟಿ ಎನ್ನುತ್ತಾರೆ. ಅತ್ಯಂತ ನೀಲಿಯಿಂದ ಬೇರೆ ಬೇರೆ ನೀಲಿಗಳಲ್ಲೂ ಕಂಡುಬರುವುದು. ಇದನ್ನು "ನಪುಂಸಕರತ್ನ" ಎನ್ನುವರು. ಇದರ ಘಡಸು-9. ಸಾಪೇಕ್ಷಸಾಂದ್ರತೆ 4.6. ಸಿಲೋನ್, ಸಯಾಂ ಮತ್ತು ಹಿಮಾಲಯದ ಬಳಿ ಸಿಗುತ್ತವೆ. ಅತ್ಯಂತ ನೀಲಿಯದನ್ನು ಪುರುಷರತ್ನವೆಂದೂ ತಿಳಿ ನೀಲಿಯನ್ನು "ಸ್ತ್ರೀನೀಲ"ವೆಂದೂ ಪರಿಗಣಿಸುವುದುಂಟು. ಪಾರದರ್ಶಕವೂ ಸ್ವಪ್ರಕಾಶಿತವೂ ಆದ ಆ ನೀಲಿಯ ಬೆಲೆ ವಿಪರೀತ. ಆಂಗ್ಲಭಾಷೆಯಲ್ಲಿ ಇದಕ್ಕೆ "ಸೆಫೈರ್" ಎನ್ನುತ್ತಾರೆ.

## 8. ವೈಡೂರ್ಯ (ಬೆಕ್ಕಿನ ಕಣ್ಣು) (CATS EYE)

ಬೆಕ್ಕಿನ ಕಣ್ಣಿನ ಆಕಾರದ ಹೊಳಪಿನ ಈ ರತ್ನ ಸಿಲೋನ್‌ನಲ್ಲಿ ಹೆಚ್ಚಾಗಿ ದೊರಕುತ್ತದೆ. ಅಲ್ಯೂಮಿನ 80 ಭಾಗ ಕೈಸೋಬೆರಿಲ್ ಉಳಿದ ಭಾಗ ಹೊಂದಿದೆ. ಘಡಸು 8.5 ಸಾಪೇಕ್ಷಸಾಂದ್ರತೆ ಸುಮಾರು 3.65. ಹೆಚ್ಚು ಹೊಳಪನ್ನು ಇತರ ರತ್ನಗಳಂತೆ ಪಡೆಯದು. ಹಾಲಿನ ವರ್ಣ, ಬಂಗಾರ ವರ್ಣ ಮುಂತಾದ ವರ್ಣಗಳಲ್ಲಿ ಸಿಗುವ ಈ ರತ್ನವನ್ನು "ಪುರುಷರತ್ನ" ವೆನ್ನುತ್ತಾರೆ. ಆಗ್ಲ ಭಾಷೆಯಲ್ಲಿ ಇದು "ಕ್ಯಾಟ್ಸ್ ಐ".

## 9. ಪ್ರವಾಳ-ವಿದ್ರುಮ (CORAL)

ಇದೂ ಸಮುದ್ರಗಳಿಂದ ದೊರಕುವ ರತ್ನ. ಪೋಲಿಪ್ಸ್ ಎಂಬ ಜಂತುವಿನಿಂದ ಉತ್ಪತ್ತಿ. ಇಟಲಿ ದೇಶದ ಪ್ರವಾಳವೇ ಶ್ರೇಷ್ಠ ಮಟ್ಟದ್ದು. ಆದರೂ ವಿಶ್ವದಾದ್ಯಂತ ಇವುಗಳು ದೊರಕುತ್ತವೆ. ಸಾಪೇಕ್ಷ ಸಾಂದ್ರತೆ ?.6. ಘಡಸು 3.5. ಸುಲಭವಾಗಿ ಬೇಕಾದ ಆಕಾರಕ್ಕೆ ತರಲು ಸಾಧ್ಯವಿದೆ. ಆದರೆ ತನ್ನ ಮೃದುತ್ವದಿಂದ ಹೆಚ್ಚು ಪಾಲಿಷ್ ಪಡೆಯಲು ಸಾಧ್ಯವಾಗದು. ರಕ್ತ ಕೆಂಪು, ಗುಲಾಬಿ ಕೆಂಪು ನಸುಗೆಂಪು ವರ್ಣಗಳಲ್ಲೂ ದೊರಕುವುದು. ಇದನ್ನು ಪುರುಷರತ್ನವೆನ್ನುವರು. ಸಾಮಾನ್ಯವಾಗಿ ನೀಳವಾದ ಪ್ರವಾಳಗಳೇ ಉತ್ಪತ್ತಿಯಾಗುವವು. ಆಂಗ್ಲ ಭಾಷೆಯಲ್ಲಿ ಇದಕ್ಕೆ "ಕೊರಾಲ್" ಎನ್ನುತ್ತಾರೆ.

ಹೀಗೆಯೇ ಉಪರತ್ನಗಳಲ್ಲೂ ವಿಶಿಷ್ಟರೀತ್ಯ ಲೋಹ ಹಾಗೂ ರಾಸಾಯನಿಕ ಸಂಯೋಜಿತವಾಗಿದ್ದು ಬಾಹ್ಯದಲ್ಲಿರುವ ಪ್ರಮುಖ ತತ್ವಗಳಾದ ಅಗ್ನಿ, ವಾಯು, ಜಲ, ಪೃಥ್ವಿ ಹಾಗೂ ಆಕಾಶಗಳಲ್ಲಿ ಪ್ರತಿಕ್ರಿಯೆ ಹೊಂದುವುದೆಂದರೆ ನಂಬಲೇಬೇಕು. ಮಾನವನೂ ಈ ಪಂಚತತ್ವ ಕ್ರಿಯೆಗಳಿಂದ ಆವೃತನಾಗಿ ಮನೋಬುದ್ಧಿಗಳಿಂದ ಬಾಹ್ಯ ಪ್ರಪಂಚದೊಡನೆ ಸಂಪರ್ಕವಿಟ್ಟಿರುವನು ಎಂದ ಮೇಲೆ ಈ ವಜ್ರಗಳು ಮಾನವನ ಮೇಲೆ ಶಾರೀರಕವಾಗಿ, ಬೌದ್ಧಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಪ್ರಭಾವ ಬೀರಲು ಸಾಧ್ಯವಿದೆ ಎಂದರೆ ತಪ್ಪಾಗಲಾರದು. ಇದನ್ನರಿತ ಭಾರತೀಯ ವೈದ್ಯ ವಿಜ್ಞಾನಿಗಳು

ತಮ್ಮ ಚಿಕಿತ್ಸಾ ಪ್ರಯೋಗಗಳಲ್ಲಿ ರತ್ನಗಳ ಉಪಯುಕ್ತತೆಯನ್ನು ಮನಗಂಡರು. ನಾನಾ ರೋಗಗಳಿಗೆ ಭಸ್ಮ, ದ್ರಾವಕ ಹಾಗೂ ರಶ್ಮಿಗಳ ಮೂಲಕ ಚಿಕಿತ್ಸೆಗೊಳಪಡಿಸಿ ವ್ಯಾಧಿಗಳನ್ನು ಹೋಗಲಾಡಿಸಿದರು. ಅದು ಹೇಗೆ? ಯಾವ ರತ್ನದಿಂದ ಯಾವ ರೋಗ ನಿವಾರಣೆ? ಮತ್ತು ಯಾರಿಗೆ ಯಾವ ರತ್ನದಿಂದ ಯಾವ ರೋಗ ನಿವಾರಣೆ? ಮತ್ತು ಯಾರಿಗೆ ಯಾವ ರತ್ನ ಪ್ರಗತಿದಾಯಕ, ಭಾಗ್ಯದಾಯಕ ಎನ್ನುವುದನ್ನು ಪರಿಶೀಲಿಸೋಣ.

## ರತ್ನಗಳಿಂದ ರೋಗಗಳ ನಿವಾರಣೆ ಮತ್ತು ತಡೆ – 3

ರತ್ನಗಳಲ್ಲಿರುವ ರಾಸಾಯನಿಕ ತತ್ವವನ್ನು ತಿಳಿಸಲಾಯಿತು. ಲೋಹಾದಿ ಸಂಬಂಧ ವಸ್ತುಗಳೇ ಅಲ್ಲದೆ ಮತ್ತಿತರ ರಸಾಯನಿಕ ಧಾತುಗಳ ಸಂಜೋಡಣೆ, ಅಣು ಪ್ರತಿಕ್ರಿಯೆ, ಶಾಖಪ್ರಸಾರಕ, ವಿದ್ಯುತ್ವಾಹಕ ಶಕ್ತಿಗಳ ಪ್ರಭಾವ ಹೊರಗಿನ ಪಂಚ ತತ್ವಕ್ರಿಯೆಯಿಂದ ಭಿನ್ನ ಭಿನ್ನ ರೂಪ ಹೊಂದಿರುವುದು.

ಮಾನವನ ಶರೀರವೂ ನಾನಾ ಲೋಹ ಹಾಗೂ ರಾಸಾಯನಿಕ ವಸ್ತುಗಳಿಂದ ರೂಪಗೊಂಡು ನಿಯಮಿತ ರೀತಿಯಲ್ಲಿ ತನ್ನ ಕ್ರಿಯೆಯನ್ನು ಅನುದಿನವೂ ಮಾಡುತ್ತಿದೆ. ದೇಹ ಮನಸ್ಸುಗಳೆರಡೂ ಉತ್ತಮ ಸ್ಥಿತಿಯಲ್ಲಿರುವುದಕ್ಕೆ ಆರೋಗ್ಯವೆನ್ನುತ್ತೇವೆ. ರಕ್ತ, ಮಜ್ಜ, ಮಾಂಸ, ಮೇದಸ್ಸು ಇತ್ಯಾದಿಗಳು ಪ್ರತಿಯೊಬ್ಬನಲ್ಲೂ ಬೇರೆ ಬೇರೆ ಗುಣಮಟ್ಟ ಹೊಂದಿರುವವು. ಬುದ್ಧಿಶಕ್ತಿ–ಮನಃಶಕ್ತಿಗಳೂ ಅಂತೆಯೇ. ಇವಿಷ್ಟ ಅಲ್ಲದೆ ನಮಗರಿವಾಗದ ಅನೇಕ ಅಂತರ್ಮುಖ ಬಹಿರ್ಮುಖ ಶಕ್ತಿಗಳೂ ನಮ್ಮಲ್ಲಿ ಸದಾಕಾಲವೂ ಪ್ರತಿಕ್ರಿಯೆ ನಡಸುತ್ತಿವೆ.

ಉದಾಹರಣೆಗೆ : ಮನಶ್ಶಕ್ತಿ, ಆತ್ಮಶಕ್ತಿ, ನಮ್ಮನ್ನಾವರಿಸಿರುವ ಪ್ರಭಾಶಕ್ತಿ, ಪ್ರಾಣಶಕ್ತಿಗಳಂತೂ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳೊಂದಿಗೆ ಸ್ಪಂದನದಿಂದಲೂ ಪಂಚತತ್ವ ವ್ಯತ್ಯಯದಿಂದಲೂ ವೈಪರೀತ್ಯ ಹೊಂದಲು ಸಾಧ್ಯ. ಈ ಅಗೋಚರ ಅವ್ಯಕ್ತ ಶಕ್ತಿಗಳು ಕೇವಲ ಪಾಶ್ಚಾತ್ಯ ವೈಜ್ಞಾನಿಕ ಅನುಕರಣೆಯಿಂದ ಅಳೆಯಲೆಸಗುವ ವಿಚಾರವಂತರಿಗೆ ಅಬೇಧ್ಯ ರಹಸ್ಯವೇ ಸರಿ. ವಾತ, ಪಿತ್ತ, ಕಫ ಎಂಬ ತ್ರಿದೋಷಗಳ ಏರುಪೇರೇ ರೋಗೋತ್ಪತ್ತಿಗೆ ಕಾರಣವೆಂದು ಭಾರತೀಯ ವೈದ್ಯ ಪದ್ಧತಿ ಸಾರುವುದು. ಬಾಹ್ಯದಲ್ಲಿರುವ ಪೃಥ್ವಿ, ಅಗ್ನಿ, ಜಲ, ವಾಯು, ಆಕಾಶಾನೆ ಪಂಚತತ್ವಾತ್ಮಕವಾದ ಶರೀರಕ್ಕೂ ವಿಶ್ವಕ್ಕೂ ಸಂಪರ್ಕವಿದೆ.

ದೇಹ ಮನಸ್ಸುಗಳೆರಡನ್ನೂ ರೋಗಗಳಿಂದ ವಿಮುಕ್ತಿ ಪಡೆದವನೂ, ರೋಗ ನಿರೋಧಕ ಶಕ್ತಿ ಹೊಂದಿದವನೂ ಆರೋಗ್ಯವಂತ. ನಮ್ಮ ಭಾರತದ ಋಷಿ ಮುನಿಗಳು ಈ ಸ್ಥಿತಿಯನ್ನು ಪಡದು ಸ್ವಾಸ್ಥ್ಯಚಿತ್ತರಾಗಿ ಸುಖದಿಂದ ಬಾಳಲು ಕೆಲವು

ಸುಲಭೋಪಾಯಗಳನ್ನು ಸಾಮಾನ್ಯನ ಒಳಗೆ ಎಟುಕುವಂತೆ ಪ್ರತಿಪಾದಿಸಿದರು. ಅವೇ ಯೋಗಾಭ್ಯಾಸ, ಆಯುರ್ವೇದ.

ಈ ಆಯುರ್ವೇದ ಪದ್ಧತಿ ರತ್ನಗಳಲ್ಲಡಗಿರುವ ರೋಗನಿರೋಧಕ ಹಾಗೂ ರೋಗ ನಿವಾರಕ ಶಕ್ತಿಯನ್ನು ಮನಗಂಡಿತು. ಅಗಸ್ತ್ಯ, ಮಾರ್ಕಂಡೇಯ, ಸುಶ್ರುತ ಮುಂತಾದವರು ತಮ್ಮ ಗ್ರಂಥಗಳಲ್ಲಿ ನವರತ್ನಗಳ ಮತ್ತು ಉಪರತ್ನಗಳ ಹಾಗೂ ಲೋಹಗಳ ಪ್ರಯೋಗವನ್ನು ಪ್ರಸ್ತಾಪಿಸಿದ್ದಾರೆ. ಅಗ್ನಿಪುರಾಣದಲ್ಲಿ ಈ ರತ್ನಗಳ ರೋಗ ನಿವಾರಕ ರಹಸ್ಯ ನಮಗೆ ಕಂಡುಬರುವುದು. ಈ ಸಂಬಂಧಿತ ಅನೇಕ ಕರಪತ್ರಗಳೂ ಓಲೆಗರಿ ಗ್ರಂಥಗಳೂ ಕಳ್ಳತನದಲ್ಲಿ ಪಾಶ್ಚಾತ್ಯರ ಕೈ ಸೇರಿವೆ.

ರಸವಾದ ಸಂಬಂಧದ ಗ್ರಂಥವೊಂದರಲ್ಲಿ "5 ರಿಂದ 10 ತೊಲಗಳಷ್ಟು ಯಾವುದೇ ರತ್ನವನ್ನು ಭಸ್ಮಮಾಡಿ (ಪುಡಿಮಾಡಿ) ದ್ರವಣಕ್ಕೆ ಪರಿವರ್ತಿಸಿ ವಿಶಿಷ್ಟ ವಿಧಾನದಿಂದ ಶಾಖ ಪ್ರವಾಹದಿಂದ ಕಾಯಿಸಿದರೆ ಅಷ್ಟೇ ಭಾರದ ಒಂದು ಘನರೂಪದ ರತ್ನ ಹೊರಬೀಳುವುದು. ಇದನ್ನು ಶುದ್ಧೀಕರಣ ಕ್ರಿಯೆಗೊಳ ಪಡಿಸಿರುವ ಅಂತಹ ರತ್ನದ ಬೆಲೆ ನೂರರಷ್ಟು ಹೆಚ್ಚಾಗುವುದು" ಎಂದು ತಿಳಿಸಿದೆ.

ನಮ್ಮ ವೈದ್ಯಕೀಯ ಗ್ರಂಥಗಳಲ್ಲಿ ಕಂಡು ಬರುವ ರತ್ನಗಳ ಭಸ್ಮ ಹೇಗೆ ರೋಗಗಳನ್ನು ನಿವಾರಿಸುವುವು, ನಿಯಂತ್ರಿಸುವವು ಎಂಬುದನ್ನು ತಿಳಿಯೋಣ.

**ಮಾಣಿಕ್ಯ :**

ಪದ್ಮರಾಗವೆಂಬ ಹೆಸರಿನಿಂದ ಇದು ಪ್ರಸಿದ್ಧಿ ಪಡೆದಿದೆ. ಇದರ ಭಸ್ಮ ವಾತ, ಪಿತ್ತ, ಶ್ಲೇಷ್ಮ ದೋಷಗಳನ್ನು ನಿವಾರಿಸುವುದು. ಅಜೀರ್ಣತೆಯನ್ನು ಹೋಗಲಾಡಿಸುವುದು. ಮತ್ತೊಂದು ಗ್ರಂಥರೀತ್ಯ ಮಾಣಿಕ್ಯ ಭಸ್ಮ ವೀರ್ಯ ವೃದ್ಧಿಗೆ, ಹೃದಯರೋಗ ನಿವಾರಣೆಗೆ, ಜ್ವರ (ಒಳಜ್ವರ) ನಿವಾರಣೆಗೆ ಮತ್ತು ಚರ್ಮರೋಗ ವಿಮುಕ್ತಿಗೆ ಅತ್ಯುಪಯುಕ್ತವೆಂದು ತಿಳಿಸಿದೆ. ಕೇವಲ ಇದರ ಆಭರಣ (ಬಂಗಾರದಲ್ಲಿ ಮಾಡಿಸಿದ ಮಾಣಿಕ್ಯ ಆಭರಣ) ಧಾರಣೆಯಿಂದ ಭೂತ, ಪ್ರೇತ, ಪೀಡೆ, ಪಿಶಾಚಾದಿ ಬಾಧೆಗಳಿಂದಲೂ, ಮಾನಸಿಕ ಭೀತಿಗಳಿಂದಲೂ ನಿವೃತ್ತಿ ಹೊಂದುವರು ಎಂದು ತಿಳಿಸಿದೆ.

**ಪುಷ್ಪರಾಗ :**

ಇದರ ಶುದ್ಧಿ ಮಾಡಿ ತಯಾರಿಸಿದ ಭಸ್ಮವನ್ನು ಸೂಕ್ತರೀತಿ ಉಪಯೋಗಿಸಿದರೆ ದೀಪನ ಶಕ್ತಿ ಹೆಚ್ಚಿಸುತ್ತದೆ. ದಾಹ, ದಣಿವು, ವಾಕರಿಕೆ, ವಾಂತಿ, ಕುಷ್ಠ ವ್ಯಾಧಿ (ಚರ್ಮರೋಗ), ವಿಷದೋಷಾದಿಗಳನ್ನು ನಿವಾರಿಸುತ್ತದೆ. ಮತ್ತೊಂದು

ಗ್ರಂಥ ಪುಷ್ಪರಾಗ ಭಸ್ಮ ಕರುಳಿನ ದೋಷ, ಮೂತ್ರಕೋಶ ದೋಷಗಳು, ಕಿವಿಯ ರೋಗ, ಬಹು ಮೂತ್ರರೋಗ ಮತ್ತು ಬಿಕ್ಕಳಿಕೆಯನ್ನು ನಿವಾರಿಸಲು ರಾಮಬಾಣದಂತಿದೆ ಎನ್ನುವುದು. ಇದು ಅತಿಕಾಮಿಗಳ ಕಾಮಾಶಕ್ತಿಯನ್ನು ತಡಗಟ್ಟಿ, ಜ್ಞಾನಶಕ್ತಿ ಹೆಚ್ಚಿಸಿ ದೇಹಕ್ಕೆ ಕಾಂತಿಯುಂಟುಮಾಡುವುದು (Controller of sex desires and passion) ಎಂದು ತಿಳಿಸುತ್ತದೆ.

**ವಜ್ರ :**

ಅಮೃತಸಮಾನವಾದ ಏಕೈಕ ರತ್ನವೇ "ವಜ್ರ" ಸರ್ವರೋಗಗಳನ್ನು ಹೋಗಲಾಡಿಸಿ ಮುಪ್ಪನ್ನು ದೂರಮಾಡಿ ಯೌವನವನ್ನು ಉಂಟುಮಾಡುವ, ವೀರ್ಯವೃದ್ಧಿ ಮಾಡುವ ಶಕ್ತಿ ಈ ರತ್ನದ ಭಸ್ಮಕ್ಕೆ ಇದೆ. ಹೃದಯ ದೌರ್ಬಲ್ಯ ಹೋಗಲಾಡಿಸಿ ನಪುಂಸಕತ್ವ ದೂರಮಾಡುವ ಉತ್ಕೃಷ್ಟ ರತ್ನ ಇದು. ಗುಪ್ತ ರೋಗಗಳಾದ ಫರಂಗಿ, ಪ್ರಮೇಹ ರೋಗಗಳ ನಿವಾರಣಗೂ ಇದನ್ನು ಬಳಸಲಾಗುತ್ತದೆ.

**ಪಚ್ಚೆ :**

ಪಾರ್ಶ್ವವಾಯು, ನರಗಳ ನಿಶ್ಶಕ್ತಿ, ಮೂರ್ಛೆ, ಉನ್ಮಾದ, ಮಾನಸಿಕ ರೋಗಗಳು, ಪಾಂಡುರೋಗ ಇವುಗಳನ್ನು ಗುಣಪಡಿಸಲು ಪಚ್ಚೆಯ ಭಸ್ಮವನ್ನು ಇತರ ಔಷಧಿಗಳ ಜೊತೆಯಲ್ಲಿ ಬೆರೆಸಿ ಕೊಡುವರು. ಇದು ಮಧುಸ ಮತ್ತು ನಾಲಿಗೆಯ ದೋಷ ನಿವಾರಣೆ ಮಾಡಬಲ್ಲದು. ಬೇರೊಂದು ಗ್ರಂಥ ಪಾಂಡುರೋಗ, ಪಿಷ ದೋಷ ಸನ್ನಿಪಾತ, ಜ್ವರ, ಶ್ವಾಶ, ಕಾಸ, ಅಗ್ನಿಮಾಂದ್ಯ ಹೋಗಲಾಡಿಸಲು ಉತ್ತಮವೆಂದು ತಿಳಿಸುವುದು.

**ಮುತ್ತು :**

ಮುತ್ತಿನಿಂದ ತಯಾರಾಗುವ ಮೌಕ್ತಿಕಾಭಸ್ಮ-ಇದು ಉನ್ಮಾದ, ಹುಚ್ಚು ಗರ್ಭದೋಷ, ಶಿರೋರೋಗ ಹಾಗೂ ಅಶಕ್ತತೆಯ ನಿವಾರಣೆಗೆ ಅತಿ ಶ್ರೇಷ್ಠವಾದ ಔಷಧಿ. ಮಾನಸಿಕ ದುಗುಡತೆಯನ್ನು ದೂರ ಮಾಡಲು ಇದರ ಬಳಕೆಯಿದೆ. ಮುತ್ತಿನ ಬಳಕೆ ಸ್ತ್ರೀಯರ ಆಭರಣಕ್ಕೆ ಮಾತ್ರವೆ ಅಲ್ಲದೆ ಅವರ ಸೌಂದರ್ಯ ವೃದ್ಧಿಗೂ ಕಾರಣವಾಗುವುದು ಎಂದು ತಿಳಿಸಿದೆ. ಶ್ವಾಸದಲ್ಲಿ ನೀರು ತುಂಬುವ ರೋಗವನ್ನೂ ಇದು ನಿವಾರಿಸಬಲ್ಲುದು (Pluerisy).

**ಗೋಮೇಧಕ :**

ಇವರ ಭಸ್ಮ ಕಫ, ಪಿತ್ತ, ಕ್ಷಯ, ಗೂರಲು, ಕುಷ್ಠವ್ಯಾಧಿಗಳ ನಿವಾರಣೆಗೆ

ಉಪಯುಕ್ತ. ಉಸಿರಾಟದ ತೊಂದರೆ ನಿವಾರಿಸಲು ಹಾಗೂ ಕೈಕಾಲುಗಳ ನೋವುಗಳನ್ನು ನಿವಾರಿಸಲು ಇದನ್ನು ಬಳಸುವರು.

**ವೈಡೂರ್ಯ :**

ರಕ್ತಪಿತ್ತ, ನೇತ್ರರೋಗ, ವ್ರಣ, ಹೊಟ್ಟೆಯುಬ್ಬರ ಮತ್ತು ಮೆದುಳಿನ ಜ್ವರ ಇವುಗಳಿಗೆ ಇದರ ಭಸ್ಮವನ್ನು ಉಪಯೋಗಿಸಿದರೆ ಉತ್ತಮ.

**ನೀಲ :**

ಇದರ ಶುದ್ಧೀಕರಿಸಿದ ಭಸ್ಮ ಕಫ, ಕ್ಷಯ, ಪಿತ್ತವಿಕಾರ, ಚರ್ಮರೋಗ, ಅಂಡಾಶಯರೋಗ, ಇಸಬು, ಕಜ್ಜಿ, ಕರುಳಿನ ವಿಕಾರ, ಜಠರರೋಗ, ಪಾರ್ಶ್ವ ವಾಯು ಮಾನಸಿಕರೋಗ, ಸ್ತ್ರೀಯರಲ್ಲಿ ಋತುದೋಷ, ಕಿವುಡುತನ, ಕುಷ್ಠ, ವಿಷಮಶೀತಜ್ವರ ಇನ್ನೂ ಇತ್ಯಾದಿ ರೋಗಗಳ ನಿವಾರಣೆಗೆ ಉಪಯೋಗ.

**ಪ್ರವಾಳ :**

ಅಜೀರ್ಣತೆ, ಮೂಳೆರೋಗ, ದೃಷ್ಟಿದೋಷ, ಅಶಕ್ತತೆ, ವೀರ್ಯಸ್ಖಲನ, ರಕ್ತಪಿತ್ತದ, ಋತುದೋಷ, ಜಠರವ್ರಣ ಮತ್ತು ಶರೀರದಾರ್ಢ್ಯ ಇಲ್ಲದವರಿಗೆ ಇದರ ಭಸ್ಮವನ್ನು ಉಪಯೋಗಿಸಿದರೆ ಗುಣ ಕಂಡುಬರುತ್ತದೆ.

ಈ ನವರತ್ನಗಳ ಭಸ್ಮವನ್ನು ಉಪಯೋಗಿಸಿ ತಯಾರಿಸುವ ಆಯುರ್ವೇದ ಔಷಧಿಗಳು ಇಂದೂ ನಮ್ಮ ದೇಶದಲ್ಲಿ ದೊರಕುತ್ತವೆ.

ನವರತ್ನಗಳಲ್ಲಿರುವ ಲೋಹಾದಿ ವಸ್ತುಗಳು ನಮ್ಮ ಶರೀರದ ಲೋಹಾದಿ ವಸ್ತುಗಳೊಂದಿಗೆ ತಮ್ಮ ವಿಶಿಷ್ಟ ಕಿರಣಗಳ ಶಕ್ತಿಯಿಂದ ಸ್ಪಂದನಕ್ಕೊಳಗಾಗಿ ನಮ್ಮ ದೇಹದ ಹೊರಗೂ ಒಳಗೂ ಪ್ರಭಾವ ಬೀರುವುದು. ಈ ಸ್ಪಂದನ ವಿದ್ಯುತ್ ಕಾರ್ಯಕ್ಕೆ ರತ್ನಗಳ ಹಾಗೂ ಶರೀರದ ಮಧ್ಯೆ ಆಭರಣ ರೂಪದಲ್ಲಿ ನಾವು ಬಳಸುವ ಬೆಳ್ಳಿ, ಬಂಗಾರ ಲೋಹಗಳು ಮಧ್ಯವರ್ತಿಯಾಗಿ ಸಂಬಂಧ ಕಲ್ಪಿಸುವವು. ಆದರಿಂದ ವಿರುದ್ಧ ಅಥವಾ ಅಗತ್ಯ ಪ್ರತಿಕ್ರಿಯೆ ನಮ್ಮಲ್ಲಿನ ಗುಪ್ತ ಹಾಗೂ ಬಾಹ್ಯ ಶಕ್ತಿಗಳನ್ನು ಬದಲಾಯಿಸಲು ಸಾಧ್ಯವಿದೆ.

ನಮಗೆ ಉತ್ತಮ ಶುಭಫಲ ನೀಡಲು ಬಳಸಬೇಕಾದ ರತ್ನ ಯಾವುದು ? ನಮಗೆ ಯಾವ ರತ್ನ ವಿರುದ್ಧ ಕ್ರಿಯೆ ಉಂಟುಮಾಡುತ್ತದೆ ? ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನ ಭಿನ್ನವಾದ ರತ್ನ ಧಾರಣೆಗೆ ಆಧಾರವೇನು ? ಅದರ ಕ್ರಮ ಯಾವ ರೀತಿ? ಇದು ಮುಂದಿನ ವಿಷಯ ವಿಶ್ವವಿಖ್ಯಾತ ಜ್ಯೋತಿಷಿ ಮತ್ತು ಸಾಮುದ್ರಿಕ "ಕೀರೋ" ತನ್ನ

"ಯೂ ಅಂಡ್ ಯುವರ್ ಸ್ಟಾರ್" ಮತ್ತು "ಬುಕ್ ಆಫ್ ನಂಬರ್ಸ್" ಎಂಬ ಸಂಖ್ಯಾಶಾಸ್ತ್ರಗ್ರಂಥಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜನನ ತಾರೀಖಿನ ಪ್ರಕಾರ ಕೊಟ್ಟಿರುವ ಪಟ್ಟಿಯಂತೆ ಅವನ ಶುಭೋದಯಕ್ಕೆ ರತ್ನಗಳನ್ನು ಉಪಯೋಗಿಸುವುದು ಸೂಕ್ತ ಎಂದಿದ್ದಾನೆ.

| ನಿಮ್ಮ ಜನನ ಮಾಸ ಮತ್ತು ತಾರೀಖು (ಇಂಗ್ಲೀಷ್ ರೀತ್ಯ) | ನಿಮಗೆ ಅದೃಷ್ಟ ರತ್ನ |
|---|---|
| (ಎ) ಡಿಸೆಂಬರ್ 21 ರಿಂದ ಜನವರಿ 20 ರೊಳಗಾಗಿ ಜನನವಾಗಿದ್ದರೆ ಮತ್ತು ಜನವರಿ 21 ರಿಂದ ಫೆಬ್ರವರಿ 19 ರೊಳಗಾಗಿ ಜನನವಾಗಿದ್ದರೆ | ನೀಲ ಅಥವಾ ಊದು ಬಣ್ಣದ ರತ್ನ |
| (ಬಿ) ಫೆಬ್ರವರಿ 20 ರಿಂದ ಮಾರ್ಚಿ 20ರ ವರೆಗೆ ಮತ್ತು ನವೆಂಬರ್ 21 ರಿಂದ ಡಿಸೆಂಬರ್ 21 ರೊಳಗಾಗಿ ಜನನವಾಗಿದ್ದರೆ | ಊದಬಣ್ಣದ (ಯಾಕೂತಿ) |
| (ಸಿ) ಮಾರ್ಚಿ 21 ರಿಂದ ಏಪ್ರಿಲ್ 19 ರೊಳಗೆ ಮತ್ತು ಅಕ್ಟೋಬರ್ 21 ರಿಂದ ನವೆಂಬರ್ 20 ರೊಳಗಾಗಿ ಜನನವಾಗಿದ್ದರೆ | ಮಾಣಿಕ್ಯ, ಸ್ವರ್ಣದ ರತ್ನ ರಕ್ತ ಮಣಿ (ಅತಿ ಕೆಂಪಾದ ರತ್ನ) |
| (ಡಿ) ಮೇ 21 ರಿಂದ ಜೂನ್ 20 ರ ವರೆಗೆ ಮತ್ತು ಆಗಸ್ಟ್ 21 ರಿಂದ ಸೆಪ್ಟೆಂಬರ್ 20 ರವರೆಗೆ ಜನನವಾಗಿದ್ದರೆ | ವಜ್ರ |
| (ಇ) ಏಪ್ರಿಲ್ 20 ರಿಂದ ಜೂನ್ 20 ರ ವರೆಗೆ ಮತ್ತು ಸೆಪ್ಟೆಂಬರ್ 21 ರಿಂದ ಅಕ್ಟೋಬರ್ 20 ರೊಳಗೆ ಜನನವಾದಲ್ಲಿ | ಪಚ್ಚೆ. ಹಸಿರುಮಣಿ ಫಿರೋಜಾ (ತಿಳಿ ಹಸಿರು ರತ್ನ) |
| (ಎಫ್) ಜೂನ್ 21 ರಿಂದ ಜುಲೈ ಅಂತ್ಯದವರೆಗೆ ಮತ್ತು ಜುಲೈ 21 ರಿಂದ ಆಗಸ್ಟ್ ಅಂತ್ಯದ ವರೆಗೆ ಜನನವಾದವರಿಗೆ | ಎಲೆಕ್ಟ್ರಿಕ್ ನೀಲ ಮತ್ತು ಇಂದ್ರಮಣಿ, ವೈಡೂರ್ಯ ತಿಳಿ ನೀಲ ಇತ್ಯಾದಿ ಯೆಂದು ಹೇಳಿರುವನು. |

ಈ ಪಟ್ಟಿಯಲ್ಲಿ ನಮೂದಿಸಿರುವುದು ಭಾರತೀಯ ಪದ್ಧತಿಗೆ ಸರಿಯಿಲ್ಲ. ಇದರಂತೆ ಬಳಕೆ ಮಾಡಿದವರಿಗೆ ಉತ್ತಮ ಫಲ ದೊರಕದೆ ಇರುವ ನಿದರ್ಶನಗಳನ್ನು ನನ್ನ ದಿನಚರಿಯಲ್ಲಿ ಗುರುತಿಸಿರುವೆ.

# ರತ್ನಗಳಿಂದ ಉನ್ನತಿ ಇಲ್ಲವೆ ಅವನತಿ – 4



ರತ್ನಗಳು ಅಭಿವೃದ್ಧಿ ಇಲ್ಲವೆ ಅವನತಿ ತರಬಲ್ಲವು. ಒಬ್ಬನಿಗೆ ವಿನಾಶಕಾರಿಯಾದ ರತ್ನ ಮತ್ತೊಬ್ಬನಿಗೆ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗಿದೆ. ವಿಶ್ವವಿಖ್ಯಾತ ಜ್ಯೋತಿಷಿ "ಕೀರೊ"ವಿನ ಅದೃಷ್ಟರತ್ನದ ಸಲಹೆ ವಾಸ್ತವಿಕವಾಗಿ ಸರಿಯೆಂದು ಕಂಡು ಬಂದಿಲ್ಲ. ಈವನಲ್ಲದೆ ಇತರ ಪಾಶ್ಚಾತ್ಯ ಶ್ರೇಷ್ಠ ಜ್ಯೋತಿಷಿಗಳು ಮತ್ತೊಂದು ರೀತಿ ಅತಿ ಸುಲಭವಾಗಿ ನಿಮ್ಮ ಜನ್ಮ ಮಾಸದಿಂದ ಅದೃಷ್ಟರತ್ನ ಯಾವುದೆಂದು ತಿಳಿಯಲು ಸಾಧ್ಯವೆಂದಿದ್ದಾರೆ. ಅದು ಹೀಗಿದೆ–

ವಿಶ್ವವಿಖ್ಯಾತ ಜ್ಯೋತಿಷಿ "ಕೀರೊ"

ನಿಮ್ಮ ಜನನ ಮಾಸ--ಅದೃಷ್ಟರತ್ನ

ಜನವರಿ – ತಮ್ರ (Garnet)
ಫೆಬ್ರವರಿ – ಜಮುನಿಯ (Amethyst)
ಮಾರ್ಚಿ – ಓತ್ತೊನ (Bloodstone)
ಏಪ್ರಿಲ್ – ವಜ್ರ (Diamond)
ಮೇ – ಪಚ್ಚೆ (Emerald)
ಜೂನ್ – ಪ್ರವಾಳ, ವೈಢೂರ್ಯ (Coral, Cats eye)
ಜುಲೈ – ಮಾಣಿಕ್ಯ (Ruby)
ಆಗಸ್ಟ್ – ಗೋಮೇಧಿಕಾ (Hessonite)
ಸೆಪ್ಟೆಂಬರ್ – ನೀಲ, ಜಮುನಿಯ (Saphire, Amethyst)
ಅಕ್ಟೋಬರ್ – ಕ್ಷೀರಸ್ಫಟಿಕ (Opal)
ನವೆಂಬರ್ – ಪುಷ್ಪರಾಗ (Topaz)
ಡಿಸೆಂಬರ್ – ಹಸಿರು ಛಾಯೆಯ ನೀಲ (Turquoise)

"ಕೀರೋ"ವಿನ ಕ್ರಮ ಸಾಯನ ಸೂರ್ಯನ ಚಲನೆಯನ್ನು ಅವಲಂಬಿಸಿದ್ದು ಅದಕ್ಕೆ ಸ್ವಲ್ಪಮಟ್ಟಿಗೆ ಆಧಾರವಿದೆ. ಅದರಲ್ಲಿ ನಕ್ಷತ್ರ-ರಾಶಿ-ಲಗ್ನಗಳ ಪ್ರಭಾವಕ್ಕೆ ಸರಿಯಾದ ಮಾಹಿತಿ ಇಲ್ಲ. ಪಾಶ್ಚಾತ್ಯ ಜ್ಯೋತಿಷಿಗಳ ಮೇಲಿನ ಪಟ್ಟಿಗೆ ಯಾವ

ಶಾಸ್ತ್ರಾಧಾರವೂ ಇಲ್ಲ. ಇಂಗ್ಲೀಷ್ ತಿಂಗಳುಗಳ ಕಲ್ಪನೆಯೂ ವರ್ಷಕ್ಕೆ 5 ತಿಂಗಳಿದ್ದುದು ನಂತರ 7-8-10-11 ಕೊನೆಗೆ 12 ತಿಂಗಳಾಗಿ ಈ ರೀತಿ ಯಾವುದೂ ರಾಜನ ಮರಣ, ಜನನ ಇಲ್ಲವೆ ಪ್ರಮುಖ ಘಟನೆಯನ್ನು ಅನುಸರಿಸಿ ವರ್ಷದ ಉತ್ಪತ್ತಿ ಗಣನೆಯಾಯಿತು. ಈ ರೀತಿಯನ್ನು ಅನುಸರಿಸಿ ರತ್ನಗಳನ್ನು ಧರಿಸಿದರೆ ನಿವೃತ್ತಿಗೆ ನಾಂದಿ. ಉನ್ನತಿ ಸ್ಥಿತಿಯಿಂದ ಪತನ. ಭಾರತೀಯ ಶಾಸ್ತ್ರಜ್ಞನ ಸಲಹೆಯೇ ಅತಿಶ್ರೇಷ್ಠ ಹಾಗೂ ಪ್ರಗತಿದಾಯಕ. ಈ ರತ್ನಗಳನ್ನು ಸೂಕ್ತ ನಿರ್ದೇಶನವಿಲ್ಲದೆ ಬಳಸಿದರೆ ಏನಾಗುವುದು? ಉತ್ತಮ ಸಲಹೆಯಂತೆ ಧರಿಸಿದರೆ ಹೇಗೆ ? ಇದಕ್ಕೆ ಕೆಲವೊಂದು ನೈಜ ಘಟನೆಗಳ ಸಾಕ್ಷ್ಯ ಚಿತ್ರಣವಿಲ್ಲಿದೆ. ವಿಮರ್ಶಿಸಿ ರತ್ನ ಬಳಕೆಯಲ್ಲಿ ಜಾಗರೂಕತೆ ವಹಿಸಿ. (ಕಾರಣಾಂತರದಿಂದ ವ್ಯಕ್ತಿಗಳ ಹೆಸರನ್ನು ಇಲ್ಲಿ ಬದಲಾಯಿಸಲಾಗಿದೆ) ಇಲ್ಲವೇ ಸಂಕ್ಷಿಪ್ತಗೊಳಿಸಲಾಗಿದೆ.

(1) ಬೆಂಗಳೂರಿನ ಭಾರಿ ರೇಷ್ಮೆ ಕೈಗಾರಿಕೋದ್ಯಮಿ ಶ್ರೀ ಡಿ. ಎ. ಅಪ್ಪನವರು ತಮ್ಮ ವ್ಯವಹಾರಕ್ಕಾಗಿ ಒಮ್ಮೆ ಬೊಂಬಾಯಿಗೆ ಹೋಗಿದ್ದರು. ಅಲ್ಲಿ ಅವರ ವಿದೇಶಿ ಮಿತ್ರನೊಬ್ಬ ಇವರಿಗೆ ಬಳುವಳಿಯಾಗಿ ಒಂದು ಶ್ರೇಷ್ಠ ದರ್ಜೆಯ ಮಾಣಿಕ್ಯ ಕೊಟ್ಟ. ಬಂಗಾರದ ಉಂಗುರದಲ್ಲಿ ಧರಿಸಿದರು. ಕೆಲವೇ ದಿನಗಳಲ್ಲಿ ಇವರ ಆರೋಗ್ಯಸ್ಥಿತಿ ಏರುಪೇರಾಯಿತು. ರಕ್ತದವಾಂತಿ, ನಿಶ್ಶಕ್ತಿ, ಎದೆಯಲ್ಲಿ ಉರಿ, ಮಾನಸಿಕ ಭಯ. ತಜ್ಞ ಡಾಕ್ಟರುಗಳಿಂದ ಪರೀಕ್ಷೆಯಾಗಿ ಇವರ ಕಾಯಿಲೆಗೆ ಕಾರಣ ಅರಿವಾಗಲಿಲ್ಲ. ಮಂತ್ರವಾದಿಗಳ ಮತ್ತು ಜ್ಯೋತಿಷಿಗಳ ಸಲಹೆ ಪ್ರಾರಂಭವಾಯಿತು ಎಲ್ಲೂ ಗುಣಮುಖದ ಚಿಹ್ನೆ ಇಲ್ಲ. ಒಂದು ಸಂಜೆ ಅವರ ಆಪ್ತ ಮಿತ್ರರೊಬ್ಬರು ನನ್ನನ್ನು ಅವರಲ್ಲಿಗೆ ಕರೆದುಕೊಂಡುಹೋದರು. ಅವರ ಜಾತಕ ಪರಿಶೀಲಿಸಿದೆ. ಗಂಡಾಂತರದ ಸೂಚನೆ ಕಂಡುಬರಲಿಲ್ಲ. ಜಾತಕವೇನಾದರೂ ತಪ್ಪಾಗಿ ಬರೆದಿರಬಹುದೆಂದು ಊಹಿಸಿ ಅವರ ಕೈರೇಖೆ ಪರೀಕ್ಷಿಸಲು ತೊಡಗಿದಾಗ ಅವರ ಬೆರಳಲ್ಲಿದ್ದ ಮಾಣಿಕ್ಯದ ಉಂಗುರ ಹೊಳೆಯಿತು. ಎಷ್ಟು ದಿನಗಳಿಂದ ಇದನ್ನು ಧರಿಸಿರುವಿರೆಂದು ವಿಚಾರಿಸಿದೆ. ಕೆಲವೇ ದಿನಗಳ ಹಿಂದೆ ಅವರ ಕೈಸೇರಿತ್ತು, ಮತ್ತು ಅದರಲ್ಲಿ ಅವರಿಗಿದ್ದ ವಿಪರೀತ ವ್ಯಾಮೋಹ ಕಂಡು ಅವರ ಜಾತಕ ರೀತ್ಯ ಮತ್ತು ಹಸ್ತರೇಖಾ ರೀತ್ಯ ಈ ರತ್ನ ಅವರ ಅನಾರೋಗ್ಯಕ್ಕೆ ಮುಖ್ಯ ಕಾರಣವೆಂದು ತಿಳಿಸಿದೆ. ನನ್ನ ಬಲವಂತದ ಸಲಹೆಯಂತೆ ಅದನ್ನು ತೆಗೆದು ತಮ್ಮ ಕುಟುಂಬದವರಿಗೆ ಕೊಟ್ಟರು. ಕೆಲವೇ ದಿನಗಳಲ್ಲಿ ಅವರ ಆರೋಗ್ಯ ಸುಧಾರಿಸಿತ್ತು, ಮತ್ತೆ ಮಾಣಿಕ್ಯದ ಉಪಯೋಗ ಮಾಡಲಿಲ್ಲ. ಜಾತಕದ ವಿಶೇಷವೆಂದರೆ ಅವರು ಜನಿಸಿದ ಲಗ್ನ-ಮಕರ. ಅದರ ಅಧಿಪತಿ ಶನಿಮಹಾತ್ಮ. ಅವನಿಗೆ ವಿರೋಧಿ ಸೂರ್ಯ. ಅವನ ರತ್ನ-ಮಾಣಿಕ್ಯ.

(2) ರಾಜಾಸ್ತಾನದಿಂದ ನಿರಾಶ್ರಿತರಾಗಿ ಬಂದವರಲ್ಲಿ ಬೆಂಗಳೂರಿನಲ್ಲಿರುವ

ಚಂಪಾಲಾಲ್ ಕೂಡ ಒಬ್ಬರು. ತಮ್ಮ ಆಸ್ತಿಪಾಸ್ತಿಗಳನ್ನೆಲ್ಲಾ ಕಳೆದುಕೊಂಡು ಹೆಂಡತಿ, ಮಕ್ಕಳೊಂದಿಗೆ ಬಡತನದಲ್ಲಿ ಸಿಕ್ಕಿ ಕಣ್ಣೀರು ಸುರಿಸುತ್ತಿದ್ದರು. ಅವರು ಪಚ್ಚೆಯ ರತ್ನದುಂಗುರವನ್ನು ಬೆಳ್ಳಿಯಲ್ಲಿ ಮಾಡಿಸಿ ಧರಿಸಿದರೆ ಅವರ ಸ್ಥಿತಿ ಉತ್ತಮ ವಾಗಬಹುದೆಂದು ಸಲಹೆ ನೀಡಲಾಯಿತು. ಹೇಗೋ ಕಷ್ಟದಿಂದ ಅದನ್ನು ಹೊಂದಿದರು. ಕೆಲವೇ ತಿಂಗಳಲ್ಲಿ ವ್ಯಾಪಾರ ಕುದಿರಿತು. ಇಂದು ಒಂದು ಸ್ವಂತ ಮನೆ, ಎರಡು ಅಂಗಡಿ ಮತ್ತು ಸ್ಟೀಲ್ ಫ್ಯಾಕ್ಟರಿಯೊಂದರ ಮಾಲೀಕರು ಇವರ ಜನ್ಮಲಗ್ನ ವೃಷಭ.

(3) 1958 ರಿಂದ 1960 ರವರೆಗೆ ಬಿ.ಕಾಂ. ಪರೀಕ್ಷೆಗೆ ಕುಳಿತು ಫೇಲಾದ ಭಗವಾನ್ ತನ್ನ ಚಂಚಲ ಬುದ್ಧಿ, ವಿದ್ಯೆಯಲ್ಲಿ ಅನಾಸಕ್ತಿ ಮತ್ತು ತನ್ನ ಆರ್ಥಿಕ ಸ್ಥಿತಿಯೇ ಇದಕ್ಕೆ ಕಾರಣವೆಂದು ತಿಳಿಸಿದ. ಸಲಹೆ ಪಡೆದು ಒಂದು ಪುಷ್ಪರಾಗ ಉಂಗುರ ಮಾಡಿಸಿ ಧರಿಸಿದ. ನಾಲ್ಕುಬಾರಿ ಫೇಲಾಗಿದ್ದವ 1961 ರಲ್ಲಿ ಪಾಸಾಗಿದ್ದ. ಇಂದು ಬ್ಯಾಂಕಿನಲ್ಲಿ ಮ್ಯಾನೇಜರ್. ಇವನ ಜನ್ಮ ದಿನಾಂಕ ಡಿಸೆಂಬರ್ 30.

(4) ತಮ್ಮ ತಂದೆಗೆ ಪ್ರೀತಿಯಿಂದ ಒಂದು ಪಚ್ಚೆಯುಂಗುರ ಮಾಡಿಸಿ ಕೊಟ್ಟರು ಶ್ರೀ ರಾಜಯ್ಯ. ಮಂಗಳವಾರ ಅಶುಭ ಮುಹೂರ್ತದಲ್ಲಿ ಅದನ್ನು ಧರಿಸಿದರು. ಮನೆಯ ವಾತವರಣವೇ ಬದಲು ! ಶತ್ರುಗಳ ಕೈ ಮೇಲಾಯಿತು. ಸಾಲ ತೆಗೆದು ಕೊಂಡವರು ಹಿಂತಿರುಗಿಸಲಿಲ್ಲ. ಈ ಪರಿಸ್ಥಿತಿಗೆ ಕಾರಣವೇ ತಿಳಿಯ ದಾಯಿತು. ಅವರ ದುಗುಡಕೆಗೆ ಕಾರಣ ಅವರ ಜನನ ತಾರೀಖಿಗೆ ಪಚ್ಚೆ ವಿರೋದ ಪ್ರಭಾವದ ರತ್ನವಾಗಿದ್ದುದು. ಅವರ ಜನನ ದಿನ ಏಪ್ರಿಲ್ 18. ಅವರಿಗೆ ಪ್ರವಾಳ ಅಥಾವ ಮಾಣಿಕ್ಯ ಪ್ರಗತಿದಾಯಕವಾದುದು.

(5) ಮತ್ತೊಬ್ಬ ಭಾರಿ ಶ್ರೀಮಂತರು. ತಮ್ಮ ಧರ್ಮಪತ್ನಿಗೆ ವಜ್ರದ ಓಲೆಗಳನ್ನು ಮಾಡಿಸಿದರು. ಕೇವಲ ಧರಿಸಿದ 30 ದಿನಗಳಲ್ಲೇ ಆಕೆಗೆ ನಾನಾ ರೋಗ, ಮೈ ಕೈ ನೋವು ! ಸ್ನಾಯುಗಳ ಭಾದೆ ಪ್ರಾರಂಭ. ವೈದ್ಯರು ಹಲವಾರು ತಿಂಗಳು ಔಷಧಿಗಳನ್ನು ಕೊಟ್ಟರೂ ಪ್ರಯೋಜನವಿಲ್ಲ. ಆಮೇಲೆ ತಿಳಿಯಿತು. ಅವರ ಪತ್ನಿ ಮೀನರಾಶಿಯವರು. ವಜ್ರವು ಶುಕ್ರನದು. ಅವರ ಅನಾರೋಗ್ಯಕ್ಕೆ ಕಾರಣ ಈ ವಜ್ರವೇ. ಕೆಂಪು ಹವಳ ಇಲ್ಲವೇ ಪುಷ್ಕರಾಗದ ಓಲೆಗಳಿದ್ದರೆ ಇವರಿಗೆ ಭಾಗ್ಯ ಹಾಗೂ ಆರೋಗ್ಯ ಎರಡು ಉತ್ತಮಗೊಳ್ಳುತಿತ್ತು. ಶ್ರೀಮಂತಿಕೆಯ ಪ್ರಭಾವ ಇದಕೆ. ಅಡ್ಡಿ ಮಾಡಿದೆ.

| | | | |
|---|---|---|---|
| 12 ಮೀನ | 1 ಮೇಷ | 2 ವೃಷಭ | 3 ಮಿಥುನ |
| 11 ಕುಂಭ | ರಾಶಿ ಚಕ್ರ | | 4 ಕಟಕ |
| 10 ಮಕರ | | | 5 ಸಿಂಹ |
| 9 ಧನು | 8 ವೃಶ್ಚಿಕ | 7 ತುಲ | 6 ಕನ್ಯ |

ರಾಶಿ ವರ್ಣಗಳು

ಮೇಷ-ಕೆಂಪು
ವೃಷಭ-ಬಿಳಪು
ಮಿಥುನ-ಹಸಿರು
ಕಟಕ-ನೇರಳೆಹಣ್ಣಿನ ಬಣ್ಣ
ಸಿಂಹ-ರಕ್ತಕೆಂಪು ಕೇಸರಿ
ಕನ್ಯಾ-ನಾನಾವರ್ಣ
ತುಲಾ-ಕಪ್ಪು
ವೃಶ್ಚಿಕ-ಬಂಗಾರವರ್ಣ
ಧನು-ತೆಳುಹಳದಿ
ಮಕರ-ನೀಲ
ಕುಂಭ-ಮಣ್ಣಿನ ವರ್ಣ
ಮೀನ-ಮೀನಿನ ವರ್ಣ

(6) ಕಲ್ಯಾಣಕುಮಾರ್ ಕಾಲೇಜು ಮೆಟ್ಟಲು ಪ್ರಯಾಸದಿಂದ ಹತ್ತಿದ್ದ. ಬಿ. ಎ. ಪರೀಕ್ಷೆಗೂ ಕುಳಿತ. ಆದರೆ ಪಾಸಾಗುವ ಭರವಸೆ ಅವನಿಗಾಗಲೀ ಅವರ ಮನೆಯವರಿಗಾಗಲೀ ಉಳಿದಿರಲಿಲ್ಲ. ಓದಿನಲ್ಲಿ ಅನಾಸಕ್ತಿ. ಫೇಲಾಗುವನೆಂದು ಎಲ್ಲರೂ ನಿರ್ಧರಿಸಿದ್ದರು. ನೋಡೋಣವೆಂದು ಒಂದು"ನೀಲ"ವನ್ನು ತರಿಸಿಕೊಟ್ಟೆ. ಉಂಗುರ ಮಾಡಿ ಧರಿಸಿದ. ಎಲ್ಲರಿಗೂ ಆಶ್ಚರ್ಯ. ಅವನು ಪರೀಕ್ಷೆಯಲ್ಲಿ ಉತ್ತಮ ಅಂಕಗಳಿಸಿ ತೇರ್ಗಡೆ ಹೊಂದಿದ್ದ. ಅವರ ತಂದೆಯಿಂದ ಇವನಿಗೆ ಸ್ಕೂಟರ್ ಉಡುಗೊರೆಯೂ ದೊರೆಕಿತು. ಈಗ ಅವನಲ್ಲಿ ವಿದ್ಯೆಯಲ್ಲಿ ಆಸಕ್ತಿ ಹುಟ್ಟಿದೆ. ನೋಡಬೇಕು ಮುಂದೇನು ಶುಭ ತರುವುದೆಂದು! ಇವನ ಜನ್ಮ ಲಗ್ನ ಮತ್ತು ರಾಶಿಗಳೆರಡೂ ಮಕರ. ಇದಕ್ಕೆ ಅಧಿಪತಿ ಶನಿಮಹಾತ್ಮ. ಅವನ ಶುಭ ರತ್ನ ನೀಲ.

(7) ಮತ್ತೊಬ್ಬರು ಕೇಂದ್ರ ಸರ್ಕಾರದ ಕೈಗಾರಿಕೆಯಲ್ಲಿ ಉನ್ನತಾಧಿಕಾರಿ ಇದ್ದಕ್ಕಿದ್ದಂತೆ ಒಂದು ಶುದ್ಧ ನೀಲಮಣಿಯನ್ನು ಕೊಂಡು ತಮ್ಮ ಉಂಗುರದಲ್ಲಿ ಸೇರಿಸಿ ಧರಿಸಿದರು. ಕೆಲವೇ ತಿಂಗಳಲ್ಲಿ ಉದ್ಯೋಗದಲ್ಲಿ ತೊಂದರೆಯುಂಟಾಗಿ ಹೊರಗೆ ಹಾಕಲ್ಪಟ್ಟರು. ಇಂದು ಅವರು ಅವರ ಕುಟುಂಬದವರಿಂದ ರಕ್ಷಣೆ ಪಡೆಯುತಿದ್ದಾರೆ. ಅವರಿಗಿರುವ ಆರ್ಥಿಕ ಮುಗ್ಗಟ್ಟು ಹೇಳತೀರದು. ಇವರದು ಸಿಂಹಲಗ್ನ ಜನನ. ಒಮ್ಮೆ ಆತ್ಮಹತ್ಯೆಗೂ ಎಣಿಸಿದ್ದರು. ಈಗ ಅವರಲ್ಲಿ ನೀಲಮಣಿಯೂ ಉಳಿದಿಲ್ಲ. ಸಮೀಪ ಬಾಂಧವರಿಗೂ ಇವರ ವಿಚಾರದಲ್ಲಿ ನಿಕೃಷ್ಟ ಮನೋಭಾವ.

(8) ಸಿದ್ಧಪಡಿಸಿದ ಉಡುಪುಗಳ ವ್ಯಾಪಾರಿ ಶ್ರೀ ಮಾನ್ ಜೆ. ರಾವ್‌ಜಿ. ಪ್ರವಾಳ ಧರಿಸಿದ ಕೆಲವೇ ದಿನಗಳಲ್ಲಿ ರಸ್ತೆಯ ಅಪಘಾತಕ್ಕೀಡಾದರು. ಹೇಗೊ

ಅದೃಷ್ಟವಶಾತ್ ಪ್ರಾಣಾಪಾಯದಿಂದ ಪಾರು, ಇವರ ವ್ಯಾಪಾರದಲ್ಲೂ ಪೈಪೋಟಿ ಯುಂಟಾಗಿ ಸಾಕಷ್ಟು ನಷ್ಟಕ್ಕೂ ವಿರೋಧಕ್ಕೂ ಕಾರಣವಾಯಿತು. ಇವರು ಪ್ರವಾ ದಿಂದ ದೂರಯಿರಬೇಕೆಂದು ಸಲಹೆ ನೀಡಲಾಯಿತು. ಇವರ ಲಗ್ನ ಕನ್ಯಾ, ಜನ್ ತಾರೀಖು ಜೂನ್ 20.

(9) ಸರ್ಕಾರಿ ಆಸ್ಪತ್ರೆಯಲ್ಲಿ ನರ್ಸ್ ಒಬ್ಬರು. ಇವರ ಬೆರಳಲ್ಲಿ ಕೆಂಪುರತ್ನ, ಕಿವಿಯಲ್ಲಿ ಕೆಂಪುಕಲ್ಲಿನ ಓಲೆಗಳು. ಪತಿರಾಯರಿಗೂ ಕೆಂಪುಕಲ್ಲಿನ ಉಂಗುರ, ಧರಿಸಿದ ಅವಧಿ ಸುಮಾರು 7 ವರ್ಷ. ಒಂದಾದ ಮೇಲೊಂದು ಗರ್ಭಪಾತ, ಸ್ನಾಯುಗಳ ನೋವು. ತಮ್ಮ ನೌಕರಿಯಲ್ಲೂ ತೊಂದರೆಗಳು, ಇವರ ಜಾತಕದಲ್ಲಿ ಗರ್ಭದೋಷ ಇರುವುದು ಕಂಡು ಬಂತು. ಅದಕ್ಕೆ ಪೂರಕವಾಗಿ ಉತ್ತಮವರ್ಗದ ಕೆಂಪುರತ್ನಗಳು ಗರ್ಭಸ್ರಾವ, ಗರ್ಭಪಾತಕ್ಕೆ ಕಾರಣವಾಗಿದೆ. ಈ ರತ್ನಗಳು ಹೆಚ್ಚು ಉಷ್ಣತೆಗೆ ಕಾರಣ ಇವರ ಲಗ್ನವೂ ಕನ್ಯಾ. ಗುರು ನೀಚನಾಗಿರುವನು. ಶನಿ ರಾಹುಗಳ ಸಂಪರ್ಕವಿದೆ. ಇನ್ನು ಮುಂದೆ ಸಂತಾನ ಫಲವಿದೆಯೇ ನೋಡಬೇಕು.

## ನಿಮ್ಮ ಶುಭಪ್ರದ ರತ್ನ-ಹೇಗೆ ತಿಳಿಯುವುದು ? – 5

| | | | |
|---|---|---|---|
| ಮೀನ ಗುರು | ಮೇಷ ಕುಜ | ವೃಷಭ ಶುಕ್ರ | ಮಿಥುನ ಬುಧ |
| ಕುಂಭ ಶನಿ | ರಾಶಿ ಚಕ್ರ ಮತ್ತು ಗ್ರಹಗಳು | | ಕಟಕ ಚಂದ್ರ |
| ಮಕರ ಶನಿ | | | ಸಿಂಹ ರವಿ |
| ಧನುಸ್ ಗುರು | ವೃಶ್ಚಿಕ ಕುಜ | ತುಲಾ ಶುಕ್ರ | ಕನ್ಯಾ ಬುಧ |

ನೀವೂ ಅದೃಷ್ಟವಂತರಾಗ ಬೇಕು. ಶುಭ ಫಲಗಳನ್ನು ಹೊಂದಬೇಕು. ಸರ್ವಕಾರ್ಯ ದಲ್ಲೂ ಪ್ರಗತಿ ಶೀಲರಾ ಬೇಕು. ಪ್ರತಿಷ್ಠಿತರಾ ಬೇಕು-ಯಾರಿಗಿಲ್ಲ ಈ ಆ ಇದಕ್ಕಾಗಿ ನಿಮಗೊಂದು ರತ್ನ ರಕ್ಷೆಗಾಗಿ ಮತ್ತು ಅದೃಷ್ಟಕ್ಕಾಗಿ. ಪಾಶ್ಚಾತ್ಯ ಜ್ಯೋತಿಷ್ಯ ನೀಡದ ಉತ್ತರ ಹಿಂದೂಜ್ಯೋತಿಷ್ಯ ಸಾಮು ದ್ರಿಕಾ ಕ್ರಮಗಳಲ್ಲಿ ಸುಲಭ ವಾಗಿ ಸೂಚಿಸಲ್ಪಟ್ಟಿದೆ.

ಜ್ಯೋತಿಷ್ಯ ಪರಿಗಣಿಸವುದು ನವಗ್ರಹಗಳನ್ನು. ಒಂದೊಂದು ರತ್ನವೂ ಒಂದೊಂದು ಗ್ರಹದ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿವೆ. ಅದು ಹೀಗೆ :

ಸೂರ್ಯ-ಮಾಣಿಕ್ಯ, ಚಂದ್ರ-ಮುತ್ತು, ಕುಜ-ಪ್ರವಾಳ, ಬುಧ-ಪಚ್ಚೆ ಗುರು-ಪುಷ್ಪರಾಗ, ಶುಕ್ರ-ವಜ್ರ, ಶನಿ-ನೀಲ, ರಾಹು-ಗೋಮೇಧಿಕ, ಕೇತು-ವೈಡೂರ್ಯ. ಮುಕ್ತೇಶ್ವರರ ಫಲದೀಪಿಕಾ.

ಈ ಒಂಬತ್ತು ಗ್ರಹಗಳು 12 ರಾಶಿಗಳಿಗೆ ಅಧಿಪತಿಗಳು. ರಾಹುಕೇತುಗಳು ಛಾಯಾ ಗ್ರಹಗಳಾದ್ದರಿಂದ ಇವರಿಗೆ ಯಾವ ರಾಶಿಯೂ ಸ್ವಂತವಿಲ್ಲ. ಸೂರ್ಯ ಮತ್ತು ಚಂದ್ರರಿಗೆ ಒಂದೊಂದು ರಾಶಿ ಸ್ವಗೃಹವಾದರೆ ಉಳಿದ ಗ್ರಹಗಳಿಗೆ ಎರಡೆರಡು ರಾಶಿಗಳ ಆಧಿಪತ್ಯ. ಈ ರೀತಿ :

ಮೇಷ ಮತ್ತು ವೃಶ್ಚಿಕ ರಾಶಿಗೆ-ಕುಜ, ವೃಷಭ ಮತು ತುಲಾರಾಶಿಗೆ-ಶುಕ್ರ ಮಿಥುನ ಮತ್ತು ಕನ್ಯಾರಾಶಿಗೆ-ಬುಧ, ಕಟಕರಾಶಿಗೆ-ಚಂದ್ರ, ಸಿಂಹರಾಶಿಗೆ-ರವಿ, ಧನಸ್ಸು ಮತ್ತು ಮೀನರಾಶಿಗೆ-ಗುರು, ಮಕರ ಮತ್ತು ಕುಂಭರಾಶಿಗೆ-ಶನಿಮಹಾತ್ಮ. (ರಾಶಿಯ ಚಿತ್ರ ಹಿಂದಿನ ಪುಟದಲ್ಲಿ ನೋಡಿ)

## ನಿಮ್ಮ ರಾಶಿ ತಿಳಿದಿದ್ದರೆ--ನಿಮ್ಮ ರತ್ನ ನಿರ್ಧಾರ

ನೀವು ಜನನವಾದ ದಿನ ಚಂದ್ರನು ಯಾವ ರಾಶಿಯಲ್ಲಿರುವನೋ ಅದೇ ನಿಮ್ಮ ರಾಶಿ ಆ ರಾಶಿಯನ್ನರಿತು ನಿಮ್ಮ ಅದೃಷ್ಟ ರತ್ನವನ್ನು ಯಾವುದೆಂದು ಹೇಳ ಬಹುದು, (ಪಟ್ಟಿ 1ನ್ನು ನೋಡಿ)

ನಿಮ್ಮ ರಾಶಿರೀತ್ಯ ರತ್ನ ಧರಿಸಿದರೆ ದೇಹಸೌಖ್ಯ, ಮನಶ್ಶಾಂತಿ ಐಹಿಕ ಸುಖಗಳು ಲಭಿಸುವುದು.

### ಪಟ್ಟಿ ನಂ. 1

| ನಿಮ್ಮ ರಾಶಿ | ನಿಮಗೆ ಶುಭಪ್ರದ ರತ್ನ |
|---|---|
| ಮೇಷ ಅಥವಾ ವೃಶ್ಚಿಕವಾಗಿದ್ದರೆ | ಪ್ರವಾಳ |
| ವೃಷಭ ಅಥವಾ ತುಲಾ ಆಗಿದ್ದರೆ | ವಜ್ರ |
| ಮಿಥುನ ಅಥವಾ ಕನ್ಯಾ ಆಗಿದ್ದರೆ | ಪಚ್ಚೆ |
| ಕಟಕವಾಗಿದ್ದರೆ | ಮುತ್ತು |
| ಸಿಂಹವಾಗಿದ್ದರೆ | ಮಾಣಿಕ್ಯ |
| ಧನಸ್ಸು ಅಥವಾ ಮೀನವಾಗಿದ್ದರೆ | ಪುಷ್ಪರಾಗ |
| ಮಕರ ಅಥವಾ ಕುಂಭ ಆಗಿದ್ದರೆ | ನೀಲ |

ವೃಷಭ ರಾಶಿಯವರು ವಜ್ರದ ಜೊತೆಯಲ್ಲಿ ಗೋಮೇಧಿಕಾವನ್ನು, ವೃಶ್ಚಿಕ ರಾಶಿಯವರು ವೈಡೂರ್ಯವನ್ನು ಪ್ರವಾಳದೊಂದಿಗೂ ಉಪಯೋಗಿಸಬಹುದು.

**ಜನನ ತಾರೀಖಿನಿಂದ ಭಾಗ್ಯ ನಿರ್ಣಯ**

**ಪಟ್ಟಿ ನಂ. 2**

| ನಿಮ್ಮ ಜನನ ತಾರೀಖು | ಸೂರ್ಯ ಚಲಿಸುವ ರಾಶಿ | ನಿಮ್ಮ ಶುಭದಾಯಕ ರತ್ನ |
|---|---|---|
| 1) ಏಪ್ರಿಲ್ 14 ರಿಂದ ಮೇ 14 ರೊಳಗಾಗಿದ್ದರೆ | ಮೇಷ | ಪ್ರವಾಳ |
| 2) ಮೇ 14 ರಿಂದ ಜೂನ್ 14 ರೊಳಗಾಗಿದ್ದರೆ | ವೃಷಭ | ವಜ್ರ (ಗೋಮೇಧಿಕಾ) |
| 3) ಜೂನ್ 14 ರಿಂದ ಜುಲೈ 14 ರೊಳಗಾಗಿದ್ದರೆ | ಮಿಥುನ | ಪಚ್ಚೆ |
| 4) ಜುಲೈ 14 ರಿಂದ ಆಗಸ್ಟ್ 14 ರೊಳಗಾಗಿದ್ದರೆ | ಕಟಕ | ಮುತ್ತು |
| 5) ಆಗಸ್ಟ್ 14 ರಿಂದ ಸೆಪ್ಟಂಬರ್ 14 ರೊಳಗಾಗಿದ್ದರೆ | ಸಿಂಹ | ಮಾಣಿಕ್ಯ |
| 6) ಸೆಪ್ಟಂಬರ್ 14 ರಿಂದ ಅಕ್ಟೋಬರ್ 14 ರೊಳಗಾಗಿದ್ದರೆ | ಕನ್ಯಾ | ಪಚ್ಚೆ |
| 7) ಅಕ್ಟೋಬರ್ 14 ರಿಂದ ನವಂಬರ್ 14 ರೊಳಗಾಗಿದ್ದರೆ | ತುಲಾ | ವಜ್ರ |
| 8) ನವಂಬರ್ 14 ರಿಂದ ಡಿಸಂಬರ್ 14 ರೊಳಗಾಗಿದ್ದರೆ | ವೃಶ್ಚಿಕ | ಪ್ರವಾಳ(ವೈಡೂರ್ಯ) |
| 9) ಡಿಸಂಬರ್ 14 ರಿಂದ ಜನವರಿ 14 ರೊಳಗಾಗಿದ್ದರೆ | ಧನುಸ್ಸು | ಪುಷ್ಯರಾಗ |
| 10) ಜನವರಿ 14 ರಿಂದ ಫೆಬ್ರವರಿ 14 ರೊಳಗಾಗಿದ್ದರೆ | ಮಕರ | ನೀಲ (ತಿಳಿ) |
| 11) ಫೆಬ್ರವರಿ 14 ರಿಂದ ಮಾರ್ಚ 14 ರೊಳಗಾಗಿದ್ದರೆ | ಕುಂಭ | ಇಂದ್ರ ನೀಲ |
| 12) ಮಾರ್ಚ 14 ರಿಂದ ಏಪ್ರಿಲ್ 14 ರೊಳಗಾಗಿದ್ದರೆ | ಮೀನ | ಪುಷ್ಪರಾಗ |

ನಿಮ್ಮ ರಾಶಿ ನಿಮಗೆ ತಿಳಿಯದಿನ್ನಿ. ಆದರೆ ಇಂಗ್ಲೀಷ್ ತಾರೀಖು ಗೊತ್ತಿದೆ ನಿಮ್ಮ ಜನನ ತಾರೀಖು ನಿಮ್ಮ ಭಾಗ್ಯರತ್ನವೆಂಬುದು ಸೂಚಿಸಬಲ್ಲದು. ಪ್ರತಿ ತಿಂಗಳೂ ಸುಮಾರು 14ನೇ ತಾರೀಖಿನಂದು ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಮಾಡುವನು. ಆ ರಾಶಿಯಲ್ಲೇ ಸುಮಾರು ಒಂದು ತಿಂಗಳು ಚಲಿಸುವನು. ನಿಮ್ಮ ಜನನ ತಾರೀಖಿನಂದು ಅವನು ಚಲಿಸುವ ರಾಶಿ ತಿಳಿದು ನಿಮ್ಮ ಭಾಗ್ಯರತ್ನ ನಿರ್ಧರಿಸಲು ಸಾಧ್ಯ. (ಪಟ್ಟಿ 2ನ್ನು ನೋಡಿ).

ವಿ. ಸೂ. :– ಈ ಪಟ್ಟಿಯಕ್ರಮದಲ್ಲಿ ರತ್ನಧರಿಸಿ ಭಾಗ್ಯವಂತರಾಗಿರುವ ಜನರ ನಿದರ್ಶನ ಹೇರಳವಾಗಿದೆ. ನಿಮ್ಮ ಜನನ ತಾರೀಖಿಗೆ ಸಂಬಂದಿಸಿದ ರತ್ನ ಸರ್ವತೋಮುಖ ಅಭಿವೃದ್ಧಿಯುಂಟುಮಾಡುವುದು. ಅದರಿಂದ 5ನೇ ರತ್ನ ಮೇಲಿನ ಪಟ್ಟಿಯಲ್ಲಿ ಕಂಡುಹಿಡಿದು ಉಪಯೋಗಿಸಿದರೆ. ಬುದ್ಧಿ, ಜ್ಞಾನ, ಸಂಪತ್ತು ಸಂತಾನ, ದೈವಿಕ ಉಪಾಸನೆಯಲ್ಲಿ ಪ್ರಗತಿ ಕಾಣುವಿರಿ. ನಿಮ್ಮ ರತ್ನಕ್ಕೆ 9ನೇ ರತ್ನವನ್ನೂ ದರಿಸಬಹುದು. ಆದರಿಂದ ಭಾಗ್ಯಪ್ರಯಾಣದಲ್ಲಿ ಸುಖ, ಮಂಗಳ ಕಾರ್ಯಗಳಲ್ಲಿ ಪ್ರಗತಿಕಾಣುವಿರಿ. ಉದಾಹರಣೆಗೆ ನೀವು ಜನಿಸಿದ ತಾರೀಖು ಜನವರಿ 15 ಎಂದು ಇಟ್ಟುಕೊಳ್ಳಿ. ಆಗ ಸೂರ್ಯನಿರುವ ರಾಶಿ ಮಕರವಾಗುತ್ತದೆ ಇದಕ್ಕೆ ರತ್ನ ನೀಲ. ಈ ತಾರೀಖು ರಾಶಿಗೆ 5ನೇ ರತ್ನ ವಜ್ರ, 9ನೇ ರತ್ನ ಪಚ್ಚೆ. ಈ ರತ್ನಗಳನ್ನೂ ಉಪಯೋಗಿಸಬಹುದು. ನೈಸರ್ಗಿಕ ರತ್ನಗಳ ಬೆಲೆ ಹೆಚ್ಚಾಗಿದ್ದು ಕೃತಕ ರತ್ನಗಳನ್ನು ( ಕೈಗಾರಿಕೆಗಳಲ್ಲಿ ತಯಾರಿಸುವ ) ನಿಜರತ್ನಗಳಿಗೆ ಬದಲಾಗಿ ಉಪಯೋಗಿಸಬಹುದು. ಇವುಗಳಿಂದಲೂ ಫಲಗಳುಂಟಾಗುವುದಾದರೂ ನಿಧಾನ ಹಾಗೂ ಪೂರ್ಣ ಪ್ರಭಾವ ಬೀರಲಾರದು.

## ನಿಮ್ಮ ಹೆಸರೂ ನಿಮ್ಮ ಅದೃಷ್ಟರತ್ನ ಸೂಚಿಸಬಲ್ಲದು

ನಿಮ್ಮ ಜನನ ತಾರೀಖೂ ನಿಮಗೆ ಹೇಳುವರಿಲ್ಲ. ರಾಶಿಯೂ ತಿಳಿಯದು ಆಗ ನಿಮ್ಮ ಹೆಸರೇ ನಿಮ್ಮ ಅದೃಷ್ಟಸೂಚಕ. ನಿಮ್ಮ ಹೆಸರ ಮೊದಲಕ್ಷರದಿಂದ ನಿಮ್ಮ ಅಭಿವೃದ್ಧಿಗಾಗಿ ರತ್ನವಿಂತಹುದೆಂದು ನಿರ್ಣಯಿಸುವರು. (ಪಟ್ಟಿ 3ನ್ನು ನೋಡಿ. ಹ್ರಸ್ವ ದೀರ್ಘಾಕ್ಷರಗಳಿಗೆ ಭೇದವಿಲ್ಲ.)

ಉದಾಹರಣೆಗೆ :– ನಿಮ್ಮ ಹೆಸರು ಲಲಿತ ಎಂದಾದರೆ ನಿಮ್ಮರಾಶಿ ಮೇಷ. ನೀವು ಪ್ರವಾಳ ಧರಿಸಬಹುದು. ಭೀಮ ಆದರೆ ಮುತ್ತು. ಕ್ಷೇತ್ರಪಾಲ ಆದರೆ ಪಚ್ಚೆ, ದ್ರೌಪತಿ ಆದರೆ ವಜ್ರ. ಈ ರೀತಿ ಉಪಯೋಗಿಸಬೇಕು. ನಿಮ್ಮ ಹೆಸರಿನ ರತ್ನಕ್ಕೆ 5ನೇ ರತ್ನ ಮತ್ತು 9ನೇ ರತ್ನ ( 3ನೇ ಪಟ್ಟಿಯ ಕ್ರಮದಲ್ಲಿ

<table>
<tr>
<td>ಮೀನ-ಗುರು (ಪುಷ್ಪರಾಗ)<br>ಪೂರ್ವಾಭಾದ್ರ-4. ದಿ<br>ಉತ್ತರಾಭಾದ್ರ-1, 2, 3, 4<br>ದು, ಖ, ಝ, ಥ<br>ರೇವತಿ-1, 2, 3, 4<br>ದೆ, ದೊ, ಚ, ಚಿ</td>
<td>ಮೇಷ-ಕುಜ (ಹವಳ)<br>ಅಶ್ವಿನಿ-1. 2, 3, 4<br>ಚು, ಚೆ, ಚೊ, ಲ<br>ಭರಣಿ-1, 2, 3, 4<br>ಲಿ, ಲು, ಲೆ, ಲೊ<br>ಕೃತ್ತಿಕಾ-1, ಅ</td>
<td>ವೃಷಭ-ಶುಕ್ರ (ವಜ್ರ)<br>ಕೃತ್ತಿಕಾ-2, 3, 4 ಇ, ಉ, ಎ<br>ರೋಹಿಣಿ-1, 2. 3, 4<br>ಒ, ವ, ವಿ, ವು<br>ಮೃಗಶಿರಾ-1, 2 ವೆ, ವೊ</td>
<td>ಮಿಥುನ-ಬುಧ (ಪಚ್ಚೆ)<br>ಮೃಗಶಿರಾ-3, 4 ಕಾ, ಕಿ<br>ಆರ್ದ್ರಾ-1, 2, 3, 4<br>ಕು, ಘ, ಙ, ಛ<br>ಪುನರ್ವಸು-1, 2. 3 ಕೆ,ಕೊ,ಹ</td>
</tr>
<tr>
<td>ಕುಂಭ-ಶನಿ (ನೀಲ)<br>ಧನಿಷ್ಠಾ-3, 4 ಗು, ಗೆ<br>ಶತಭಿಷ-1, 2, 3, 4<br>ಗೊ, ಸ, ಸಿ, ಸು<br>ಪೂರ್ವಾಭಾದ್ರ-1, 2, 3<br>ಸೆ, ಸೊ, ದ</td>
<td colspan="2" rowspan="2">ರಾಶಿ ಚಕ್ರ<br>★ ಪ್ರತಿ ರಾಶಿಗೂ ಅದರ ಹೆಸರು ಮತ್ತು ಅಧಿಪತಿಯನ್ನು ದಪ್ಪಕ್ಷರಗಳಲ್ಲಿ ಕೊಡಲಾಗಿದೆ.<br>★ ಪ್ರತಿ ರಾಶಿಯಲ್ಲೂ ಇರುವ ನಕ್ಷತ್ರಗಳು ಅವುಗಳಪಾದ ಸಂಖ್ಯೆಗಳನ್ನು ತಿಳಿಸಿದ್ದೇವೆ.<br>★ ಪ್ರತಿ ನಕ್ಷತ್ರದ ಪಾದಕ್ಕೆ ಸಂಬಂಧಿಸಿದ ಅಕ್ಷರ ತಿಳಿಸಲಾಗಿದೆ. ಜಾತಕವಿಲ್ಲದವರು ತಮ್ಮ ಹೆಸರಿನ ಮೊದಲಕ್ಷರದ ಮೂಲಕ ನಾಮನಕ್ಷತ್ರ, ಪಾದ ಮತ್ತು ರಾಶಿಯನ್ನು ತಿಳಿಯಲು ಈ ಚಕ್ರದಿಂದ ಸುಲಭ.</td>
<td>ಕಟಕ-ಚಂದ್ರ (ಮುತ್ತು)<br>ಪುನರ್ವಸು-4 ಹಿ<br>ಪುಷ್ಯ-1, 2, 3, 4<br>ಹು, ಹೆ, ಹೊ, ಡ<br>ಆಶ್ಲೇಷ-1, 2,3, 4<br>ಡಿ, ಡು, ಡೆ, ಡೊ</td>
</tr>
<tr>
<td>ಮಕರ-ಶನಿ (ನೀಲ)<br>ಉತ್ತರಾಷಾಢ-2, 3, 4<br>ಜೊ, ಜ, ಜಿ<br>ಶ್ರವಣ-1, 2, 3, 4<br>ಶಿ, ಶು, ಶೆ, ಶೊ<br>ಧನಿಷ್ಠಾ-1. 2 ಗಾ, ಗಿ</td>
<td>ಸಿಂಹ-ರವಿ (ಮಾಣಿಕ್ಯ)<br>ಮಖಾ-1, 2, 3, 4<br>ಮ, ಮಿ, ಮು, ಮೆ<br>ಪುಬ್ಬಾ-1, 2, 3, 4<br>ಮೊ, ಟ, ಟಿ, ಟು<br>ಉತ್ತರ-1 ಟೆ</td>
</tr>
<tr>
<td>ಧನಸ್ಸು-ಗುರು (ಪುಷ್ಪರಾಗ)<br>ಮೂಲ-1, 2, 3, 4<br>ಯೆ, ಯೊ, ಬ, ಬಿ<br>ಪೂರ್ವಾಷಾಢ-1, 2, 3, 4<br>ಬು, ಧ, ಭ, ಢ<br>ಉತ್ತರಾಷಾಢ-1 ಬೆ</td>
<td>ವೃಶ್ಚಿಕ-ಕುಜ (ಹವಳ)<br>ವಿಶಾಖ-4 ತೋ<br>ಅನೂರಾಧ-1, 2, 3, 4<br>ನ, ನಿ, ನು, ನೆ<br>ಜ್ಯೇಷ್ಠಾ-1, 2. 3, 4<br>ನೊ, ಯ, ಯಿ, ಯು</td>
<td>ತುಲಾ-ಶುಕ್ರ (ವಜ್ರ)<br>ಚಿತ್ತಾ-3, 4 ರ, ರಿ<br>ಸ್ವಾತಿ-1. 2, 3, 4<br>ರು, ರೆ, ರೊ, ತ<br>ವಿಶಾಖ-1. 2, 3<br>ತಿ, ತು, ತೆ</td>
<td>ಕನ್ಯಾ-ಬುಧ (ಪಚ್ಚೆ)<br>ಉತ್ತರಾ-1, 2, 3 ಟೊ, ಪ, ಪಿ<br>ಹಸ್ತ-1, 2, 3, 4<br>ಪು, ಷ, ಣ, ಠ<br>ಚಿತ್ತಾ-1, 2 ಪೆ, ಪೊ</td>
</tr>
</table>

**ಉಪಯೋಗಿಸಿದರೆ—ಸಂತಾನ**, ವಿದ್ಯಾಪ್ರಾಪ್ತಿ, ಸಂಪತ್ತು, ಸ್ನೇಹ, ಪ್ರೀತಿ ಭಾಗ್ಯ ವೃದ್ಧಿಯಾಗುವುದಾಗಿ ತಿಳಿಸಿರುವರು, ಒಂದೂ ಜ್ಯೋತಿಷ್ಯಶಾಸ್ತ್ರ ಲಗ್ನ ಆಧಾರಿತ ರತ್ನ ಧರಿಸುವುದೇ ಸರ್ವೋತ್ಕೃಷ್ಟ ಕ್ರಮವೆಂದು ತಿಳಿಸಿದೆ. ನಿಮ್ಮ ಲಗ್ನ ತಿಳಿಯಲು **ಜನನ ತಾರೀಖು, ಕಾಲ, ಸ್ಥಳ** ಇವಿಷ್ಟೂ ಅತಿಮುಖ್ಯ, ನಿಮ್ಮ ಜಾತಕ ಫಲವೂ ಈ **ಲಗ್ನದ ಬಲಾಬಲದಿಂದಲೆ.** ಯಾವುದೇ ದಿನ ಪೂರ್ವ ಕ್ಷಿತಿಜದಲ್ಲಿ ಇಷ್ಟಕಾಲಕ್ಕೆ **ಉದಯಿಸುವ ರಾಶಿಗೆ ಲಗ್ನವೆಂದು** ಕರೆಯುತ್ತಿವೆ. ಲಗ್ನವನ್ನು ಸೂರ್ಯ ಆಧಾರಿತ **ವಾಗಿ ಕಂಡುಹಿಡಿಯುವುದರಿಂದ** ಸೂರ್ಯ ರಾಶಿಗೂ (ಜನನ ತಾರೀಖಿನ ಪಟ್ಟಿಯಂತೆ) **ಲಗ್ನಕ್ಕೂ ಅಷ್ಟೇ** ಪ್ರಾಮುಖ್ಯತೆ ಇದೆಯೆನ್ನುವರು, ಲಗ್ನವರಿತು ರತ್ನ ಧಾರಣೆ **ಮಾಡಿದರೆ ಅಶುಭ ನಿವಾರಣೆ**, ಶುಭವೃದ್ಧಿ ಗಳೆರಡೂ ಉಂಟಾಗುವುದಾಗಿ ತಿಳಿಸಿರುವರು.

**ಗಮನಿಸಿ** : ಹೆಸರಿನ ಪ್ರಭಾವಕ್ಕೆ ಸಂಬಂಧಿಸಿದ ರತ್ನಕ್ಕಿಂತಲೂ ರಾಶಿ **ಸಂಬಂಧಿತ ರತ್ನಧಾರಣೆ** ಉತ್ತಮ. ಚಂದ್ರ ಆಧಾರಿತ ರಾಶಿ ಇಲ್ಲವೇ ಸೂರ್ಯ **ಆಧಾರಿತ ರಾಶಿ (ತಾರೀಖು ರೀತ್ಯ)** ಯಂತೆ ರತ್ನ ಧರಿಸುವುದು ಸಮ ಫಲವುಳ್ಳದ್ದು. **ಲಗ್ನ** ಆಧಾರಿತ ರತ್ನ ಸರ್ವ ಶ್ರೇಯಸ್ಕರ, (ಸುಲಭವಾಗಿ ಲಗ್ನ ಕಂಡುಹಿಡಿಯುವ **ಮತ್ತು** ಲಗ್ನ ಸಂಬಂಧಿತ ರತ್ನ ಇತ್ಯಾದಿಗೆ ಲೇಖನಗಳನ್ನು ಓದಿ ನನ್ನ "**Astrology for you**" ಎಂಬ ಇಂಗ್ಲೀಷ್ ಪುಸ್ತಕದಲ್ಲೂ ಈ ವಿವರಣೆ ಗಳನ್ನು ಕೊಟ್ಟಿದೆ). ಹಾಗು ಅತಿ ಸರಳ ಶೀಘ್ರವಾಗಿ ಲಗ್ನ ಕಂಡುಹಿಡಿಯಲು ನನ್ನ "**ಒಂದೇ ನಿಮಿಷದಲ್ಲಿ ಲಗ್ನ ಸಾಧಿಸಿ**" ಎಂಬ ಗ್ರಂಥ ಓದಿ.

**ರತ್ನಗಳಲ್ಲೂ ಶತ್ರು .... ಮಿತ್ರತ್ವ**

ಪ್ರವಾಳಕ್ಕೆ–ಪಚ್ಚೆ, ಪುಷ್ಪರಾಗಕ್ಕೆ–ವಜ್ರ, ನೀಲಕ್ಕೆ–ಮಾಣಿಕ್ಯ, ಮುತ್ತಿಗೆ–ವೈಡೂರ್ಯ, ಗೋಮೇಧಿಕಕ್ಕೆ–ಮಾಣಿಕ್ಯ ವಿರುದ್ಧ ರತ್ನಗಳು. **ಮಿತ್ರ ರತ್ನಗಳು** : ಪುಷ್ಪರಾಗ–ಪ್ರವಾಳ, ಮಾಣಿಕ್ಯ–ಮುತ್ತು ಇವು ಪರಸ್ಪರ ಮಿತ್ರರತ್ನಗಳು. ನೀಲ, ವಜ್ರ–ವೈಡೂರ್ಯ–ಗೋಮೇಧಿಕಾ, ಪಚ್ಚೆ ಇವು ಒಂದಕ್ಕೊಂದು ಮಿತ್ರ ರತ್ನಗಳು.

ನಿಮ್ಮ ಲಗ್ನ ಮೇಷವಾದರೆ ನಿಮ್ಮ ವೃದ್ಧಿಗೆ ಪ್ರವಾಳ ಶುಭಫಲ ಕೊಡುತ್ತದೆ. ಪಚ್ಚೆ ನಿಮಗೆ ಅಶುಭದಾಯಕ. ಕಾರಣ, ನಿಮ್ಮ ರತ್ನಕ್ಕೆ ಪಚ್ಚೆ ಶತೃರತ್ನ, ನೀವು ಪಚ್ಚೆ ಧರಿಸಿದರೆ ರೋಗ, ಶತೃತ್ವ, ಜಗಳ, ನಷ್ಟ ಮುಂತಾದ ಅಶುಭ ಫಲ ಗಳನ್ನುಂಟುಮಾಡುವುದು.

**ವಿದ್ಯಾಭ್ಯಾಸದಲ್ಲಿ ತೊಡಕು, ಪರೀಕ್ಷೆಯಲ್ಲಿ ಅನುತ್ತೀರ್ಣ....?**

ವಿದ್ಯಾಭ್ಯಾಸವನ್ನೇನೊ ಮಾಡಬೇಕೆಂಬ ಆಸೆ. ಆದರೆ ಜ್ಞಾಪಕಶಕ್ತಿ ಸಾಲದು. ಓದಿರುವುದೆಲ್ಲ ಮರೆತುಹೋಗುವುದು. ನಿಮ್ಮ ಬುದ್ಧಿ ತೀಕ್ಷ್ಣವಾಗ ಬೇಕು. ವಿದ್ಯೆಯಲ್ಲಿ ಆಸಕ್ತಿ ಉಂಟಾಗಬೇಕು. ಇದಕ್ಕೂ ರತ್ನಧಾರಣೆ ಸೂಚಿಸು ವರು–ಹೇಗೆ ?

ನಿಮ್ಮ ಲಗ್ನದ ರತ್ನ ಇಲ್ಲವೆ (ಸೂರ್ಯನ) ತಾರೀಖಿನ ರೀತ್ಯ ರತ್ನಕ್ಕೆ 2ನೆಯ 4ನೆಯ ಮತ್ತು 5ನೆಯ ರತ್ನವನ್ನು ಪರೀಕ್ಷೆಕಾಲದಲ್ಲಿ. ಅಧ್ಯಯನ ಕಾಲದಲ್ಲಿ ಉಪಯೋಗಿಸಿದರೆ ನಿಮಗೆ ವಿದ್ಯೆಯಲ್ಲಿ ಆಸಕ್ತಿ, ಹೆಚ್ಚು ಜ್ಞಾಪಕಶಕ್ತಿ ಮತ್ತು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಸಹಾಯಕವಾಗಬಹುದು (ಪಟ್ಟಿ 3 ಅಥವಾ 2ರ ಕ್ರಮದಲ್ಲಿ ಎಣಿಕೆ).

ಇದೇ ರೀತಿ ವಿವಾಹವಾಗದವರಿಗೆ ಆಗಾಗ ಅಪಘಾತಗಳಿಗೆ ಈಡಾಗು ವವರಿಗೆ ದೋಷ ತಪ್ಪಿಸಲು ರತ್ನಧಾರಣೆ ಸೂಚಿಸಲ್ಪಟ್ಟಿದೆ.

ನವರತ್ನದುಂಗುರದ ಪ್ರಭಾವ ಮತ್ತು ನವರತ್ನಚಕ್ರ, ರತ್ನ ಪರೀಕ್ಷೆ. ಉಪರತ್ನ, ರತ್ನಧಾರಣ ಮಹೂರ್ತ, ಶುಭದಿನ ಇತ್ಯಾದಿಗೆ ಮುಂದೆ ಓದಿ.


ನವರತ್ನಗಳು



ಚಿತ್ರ–1

ಗ್ರಹಗಳು ಒಂಬತ್ತು. ಒಂದೊಂದು ಗ್ರಹಕ್ಕೆ ಒಂದೊಂದು ರತ್ನ ಆದ್ದರಿಂದಲೇ ಅವುಗಳಿಗೆ ನವರತ್ನಗಳೆನ್ನುವೆವು. ಈ ಒಂಬತ್ತು ರತ್ನಗಳನ್ನೂ ಸೇರಿಸಿ ಒಂದು ಉಂಗುರದಲ್ಲಿ ಹಾಕಿಸಿ ಧರಿಸುವ ವಿಧಾನಕ್ಕೆ **"ನವರತ್ನದುಂಗುರ"** ವೆನ್ನುವರು.

ಎಲ್ಲ ಗ್ರಹಗಳ ದೋಷ ನಿವಾರಣೆಗೂ ಸರ್ವ ಶುಭಫಲಗಳನ್ನು ಪಡೆಯಲಿಕ್ಕೂ ಪೌರಾತ್ಯ ಪಾಶ್ಚಾತ್ಯ ದೇಶಗಳಲ್ಲಿ ನವರತ್ನದುಂಗುರ ಈಗೀಗ ಹೆಚ್ಚು ಪ್ರಚಲಿತವಾಗುತ್ತಲಿದೆ. ಸರ್ವಸಂರಕ್ಷಣೆ, ಸರ್ವಸಿದ್ಧಿ, ಸರ್ವ ಕಷ್ಟಹರ. ಸರ್ವಾಭೀಷ್ಟ ಫಲಪ್ರದವಾದ ಈ ನವರತ್ನದುಂಗುರದ ರಹಸ್ಯವೇನು ?

ಅನಾದಿ ಕಾಲದಿಂದಲೂ ರಾಜ ಮಹಾರಾಜರೂ ಚಕ್ರವರ್ತಿಗಳೂ ಈ ನವರತ್ನದುಂಗುರ ಬಳಸುತ್ತಿದ್ದುದು ಕಂಡುಬರುವುದು. ತಮ್ಮ ಲಗ್ನ ರಾಶಿ ಯಾವುದೋ ಅದರ ಅಧಿಪತಿಗೆ ಸಂಬಂಧಿಸಿದ ರತ್ನವನ್ನು ಮಧ್ಯೆ ಸ್ಥಿತಪಡಿಸಿ ಉಳಿದ ಎಂಟು ರತ್ನಗಳನ್ನು ಸುತ್ತಲೂ ಬಿಗಿಪಡಿಸುವರು. ಈ ಎಂಟು ರತ್ನಗಳ ತೂಕ, ಆಕಾರ, ಗಾತ್ರಗಳು ಒಂದೇ ಸಮನಿರಬೇಕು ಮತ್ತು ಮಧ್ಯದ ರತ್ನ ಇವುಗಳಿಗಿಂತಲೂ ಮೀರಿರಬೇಕು. ನಿಯಮಬದ್ಧವಾಗಿಯೂ ಶಾಸ್ತ್ರಬದ್ಧ

ವಾಗಿಯೂ ಈ ಉಂಗುರವನ್ನು ತಯಾರಿಸಿ ಒಂದು ದೇವಾಲಯದಲ್ಲಿ ಪೂಜಾದಿ ಕಾರ್ಯ, ಅನ್ನದಾನ ಮುಂತಾದ ವಿಶಿಷ್ಟ ವಿಧಿಗಳನ್ನು ಅನುಸರಿಸಿದ ತರುವಾಯ ಒಂದು ಶುಭ ಮುಹೂರ್ತದಲ್ಲಿ ಅದರಲ್ಲೂ ಶುಕ್ಲಪಕ್ಷದಲ್ಲೇ ಧರಿಸಬೇಕು. ಹೀಗೆ ಧರಿಸಿದ ರತ್ನದುಂಗುರ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಿದ್ಧಿಗೆ ಮಾಧ್ಯಮವಾಗಿತ್ತೆಂದು ಭಾವಿಸಿರಬೇಕು. ಇನ್ನೂ ವಿಶೇಷವೆಂದರೆ ಇದನ್ನು ಧರಿಸಿದ ರಾಜನಿಗೆ ಶತ್ರುಭೀತಿಯಾಗಲಿ ರಾಜ್ಯದಲ್ಲಿ ಕ್ಷಾಮವಾಗಲಿ ಉಂಟಾಗದು ಎಂಬ ವಿಶ್ವಾಸ.

ಕಾಲಕ್ರಮೇಣ ರಾಜರ ಮತ್ತು ಚಕ್ರವರ್ತಿಗಳ ಅಭಿವೃದ್ಧಿ, ಪ್ರತಿಷ್ಠೆಗೆ ಕಾರಣವಾದ ಈ ನವರತ್ನದುಂಗುರ ಆಗರ್ಭ ಶ್ರೀಮಂತರನ್ನೂ ಆಕರ್ಷಿಸಿತು. ವಿಪುಲವಾದ ಐಶ್ವರ್ಯ, ಕೀರ್ತಿ, ಸ್ಥಾನ, ಮಾನಗಳಿಸಲು ಸಹಾಯಕವಾಯ್ತೆಂದು ವಿವರಿಸುವ ದಂತಕಥೆಗಳು ಈಗಲೂ ಅಲ್ಲಲ್ಲಿ ಪ್ರಚಾರದಲ್ಲಿದೆ.

ಇದರ ಮಹತ್ವ ಅಷ್ಟಕ್ಕೇ ನಿಲ್ಲದೆ ಪಾಶ್ಚಾತ್ಯ ದೇಶಗಳಿಗೂ ಹರಡಿ ಅನೇಕ ವಿದೇಶಿಯರಿಗೂ ಈ ರತ್ನದುಂಗುರ ನಮ್ಮ ದೇಶದಿಂದ ರವಾನಿಸಲ್ಪಟ್ಟಿತು. ಈಗಲೂ ನಮ್ಮ ದೇಶದಲ್ಲಿ ತಯಾರಾಗುವ ನವರತ್ನದುಂಗುರಗಳು ಪಾಶ್ಚಾತ್ಯ ದೇಶಗಳಲ್ಲಿ ಉಪಯೋಗಿಸಲ್ಪಡುತ್ತಿವೆ. ಯಾವ ನವರತ್ನದುಂಗುರ ರಾಜಮಹಾರಾಜರ ಕೈಲಿದ್ದು, ಅಂತಸ್ತು, ಐಶ್ವರ್ಯ, ಆರೋಗ್ಯ ಕೊಟ್ಟಿತೋ ಅಂತಹ ಉಂಗುರ ಧರಿಸಿ ಅವರಂತೇ ರಾಜಯೋಗ ಅನುಭವಿಸಬೇಕೆಂಬ ಆಕಾಂಕ್ಷೆ ನಿಮಗೂ ಇಲ್ಲವೆ? ಆದರೆ ಆ ಉಂಗುರದ ನೈಸರ್ಗಿಕ ರತ್ನಗಳ ಬೆಲೆಯೇನು? ಅದು ಅನೇಕ ಸಹಸ್ರ ರೂ. ಗಳ ಖರ್ಚಿದಿಂದ ತಯಾರಿಸಲ್ಪಡುವುದು. ಅಂದಮೇಲೆ ಭಾರೀ ಶ್ರೀಮಂತರ ಸ್ವತ್ತು ಈ ಉಂಗುರ.

ಸುಲಭ ಬೆಲೆಗೆ ನೀವು ಧರಿಸಬಹುದಾದ ನವರತ್ನದುಂಗುರಗಳನ್ನು ಈಗ ಉತ್ಪತ್ತಿಮಾಡುತ್ತಿದ್ದಾರೆ. ಇದರಲ್ಲಿ ನಿಜರತ್ನಗಳಿಗೆ ಬದಲಾಗಿ ರಾಸಾಯನಿಕ ಸಂಜೋಡಣೆಯಿಂದ ಕೈಗಾರಿಕೆಗಳಲ್ಲಿ ತಯಾರಾದ ಕೃತಕ ರತ್ನಗಳನ್ನು ಜೋಡಿಸಿ ಸ್ಥಿತ ಪಡಿಸುವರು. ಕೇವಲ ಕೆಲವು ನೂರು ರೂ.ಗಳಲ್ಲಿ ಇದುನಿಮಗೂ ಲಭ್ಯವಾಗಬಹುದು. ನೈಜ ರತ್ನದುಂಗುರದಂತೆ ಪೂರ್ಣ ಪ್ರಭಾವ ಬೀರದೆಹೋದರೂ ನಿಷ್ಫಲಕಾರಿಯಲ್ಲದ ಈ ನವರತ್ನದುಂಗುರ ಇಂದು ಜನಪ್ರಿಯತೆ ಪಡೆಯುತ್ತಿದೆ. ಉತ್ತಮ ಫಲಗಳನ್ನು ಈ ರೀತಿ ಉಂಗುರ ಧರಿಸಿ ನಡೆಯುತ್ತಿರುವ ವ್ಯಕ್ತಿಗಳು ಹಲವರುಂಟು. ಅವರ ಅಭಿವೃದ್ಧಿ ಸಾಕಷ್ಟಾಗಿದೆ.

ನವರತ್ನಗಳು ಲಭ್ಯವಿಲ್ಲದಾಗ ಕೃತಕ ರತ್ನಗಳೂ ಅಭಾವವಿದ್ದಾಗ ಉಪರತ್ನಗಳಿಂದಲೂ ನವರತ್ನದುಂಗುರ ತಯಾರಿಸಲಾಗುತ್ತದೆ. ಇದೂ ಪ್ರಯೋಜನಕಾರಿಯಾಗಿ ಕಂಡು ಬಂದಿದೆ.

**ನವರತ್ನ ಚಕ್ರ ?**

ರೋಗ ನಿವಾರಣೆಗೆ ನಿರ್ಮಾಣವಾದ ಒಂದು ಹೊಸ ಸಂಶೋಧನೆ. ನವರತ್ನಗಳನ್ನು ನವರತ್ನದುಂಗುರದಂತೆಯೇ ಇಲ್ಲೂ ಉಪಯೋಗಿಸಲಾಗುವುದು. ಈ ಒಂಬತ್ತು ರತ್ನಗಳನ್ನೂ ಸಮತೂಕ, ಗಾತ್ರ, ಆಕಾರದಲ್ಲಿ ಆರಿಸಿಕೊಂಡು ಒಂದು ಲೋಹದ ಚಕ್ರದಲ್ಲಿ ಸ್ಥಿತವಡಿಸಿ ಆ ಚಕ್ರದ ಸ್ವಯಂಚಾಲಿತ ಇಲ್ಲವೇ ಬೇರೆ ಯಾವುದೇ ರೀತ್ಯ ಸುತ್ತಿರುಗುವಂತೆ ಮಾಡುವುದು ಅತಿಮುಖ್ಯ. ಯಾವ ವ್ಯಕ್ತಿ ರೋಗದಿಂದ ನರಳುತ್ತಿರುವನೊ ಅವನ ಭಾವಚಿತ್ರವನ್ನು ಈ ಸುತ್ತುವ ಚಕ್ರದ ಎದುರಿನಲ್ಲಿರಿಸಬೇಕು. ರತ್ನಗಳಿಗೆ ಬೆಳಕಿನ ಕಿರಣಗಳನ್ನು ಬೀಳುವಂತೆ ಮಾಡಿದರೆ ಆಗ ಆ ರತ್ನಗಳಿಂದ ಉಂಟಾಗುವ ಪ್ರತಿಕಿರಣಗಳು ರೋಗಿಯ ಭಾವಚಿತ್ರದ ಮೇಲೆ ಹಾಯಲ್ಪಡುವವು. ಈ ರೀತಿ ನವರತ್ನಗಳಿಂದ ಉತ್ಪತ್ತಿಯಾದ ಪ್ರಭಾ ಕಿರಣ ಭಾವಪಟದ ಮೇಲೆ ಹಾಯುತ್ತಿರುವ ಮೂಲಕ ದೂರದಲ್ಲಿರುವ ರೋಗಿಗೆ ರೋಗ ನಿವಾರಿಸಬಲ್ಲುದು ಎಂದು ಹೇಳುವರು. ಈಗಾಗಲೇ ವಿದೇಶಗಳಲ್ಲಿ ಈ ಪ್ರಯೋಗ ನಡೆಯುತ್ತಿದೆ. ನಮ್ಮ ಕರ್ನಾಟಕದಲ್ಲೂ ಈ ವಿಚಾರವರಿತ ತಜ್ಞರು ಕೆಲವರು ಇರುವರು. ರೋಗಿಯ ನೇರ ಸಂಪರ್ಕವಿಲ್ಲದೆ ರತ್ನ ಪ್ರಭಾಕಿರಣಗಳಿಂದ ರೋಗ ನಿವಾರಿಸುವ ಶಕ್ತಿ ಇದೆಯೆಂಬ ವಿಷಯದಲ್ಲಿ ಇನ್ನೂ ಹೆಚ್ಚಿನ ಪ್ರಯೋಗಗಳನ್ನು ನಡೆಸಿದಲ್ಲಿ ಯಂತ್ರಶಾಸ್ತ್ರ ಹಾಗೂ ರತ್ನಶಾಸ್ತ್ರಗಳೆರಡಕ್ಕೂ ಒಂದು ವಿಶೇಷ ಸ್ಥಾನ ದೊರಕುವುದರಲ್ಲಿ ಸಂದೇಹವಿಲ್ಲ.

**ನಿಮ್ಮ ಶುಭಪ್ರದ ರತ್ನ–ನಿಮ್ಮ ಹಸ್ತ ಸಾಮುದ್ರಿಕೆಯಿಂದ**



ಚಿತ್ರ 2

ನಿಮ್ಮ ಶುಭಪ್ರದ ರತ್ನ ಎಂತಹುದೆಂದು ನಿರ್ಣಯಿಸಲು ನಿಮ್ಮಲ್ಲಿ ಜಾತಕವಿಲ್ಲ. ಜನನ ತಾರೀಖು ಗೊತ್ತಿಲ್ಲ. ನಿಮ್ಮ ಹೆಸರನ್ನೂ ವಿನಾ ಕಾರಣ ಎರಡು ಮೂರು ಬಾರಿ ಬದಲಾಯಿಸಿರುವಿರಿ. ಹುಟ್ಟಿದಾಗ ನಿಮ್ಮ ಹೆಸರು ಏನೆಂದು ಕರೆದರೋ ಅದು ಇಂದು ಬದಲಾಗಿದೆ. ಈ ರೀತಿ ಅನೇಕ ಅನುಮಾನಗಳಿದ್ದಾಗ ಹಸ್ತಸಾಮುದ್ರಿಕೆ ನಿಮ್ಮ ಶುಭಪ್ರದ ರತ್ನ ನಿರ್ಣಯಿಸಬಲ್ಲದು.

ಕಣ್ಣಿಗೆ ಕಾಣುವ ಗುರು, ಶನಿ, ರವಿ, ಬುಧ, ಕುಜ, ಶುಕ್ರ ಮತ್ತು ಚಂದ್ರರಿಗೆ ನಿಮ್ಮ ಹಸ್ತದಲ್ಲಿ 7 ಸ್ಥಾನಗಳಿವೆ. ಛಾಯಾಗ್ರಹಗಳಾದ ರಾಹು-ಕೇತು ಗಳಿಗೆ ಸ್ಥಾನವಿಲ್ಲ. ಈ ಗ್ರಹ ಸ್ಥಾನಗಳ ಪೈಕಿ ಯಾವ ಗ್ರಹ ಉತ್ತಮವಿದೆಯೋ ಅದಕ್ಕೆ ಸಂಬಂಧಿತ ರತ್ನ ನೀವು ಧರಿಸಿದರೆ ನಿಮ್ಮ ಅಭಿವೃದ್ಧಿಗೆ ಕಾರಣವಾಗುವುದು.

ಉತ್ತಮ ಗ್ರಹ ಯಾವುದೆಂದು ಹೇಳಬೇಕಾದರೆ ಆ ಗ್ರಹದ ಸ್ಥಾನ ಇತರ ಹಸ್ತದ ಭಾಗಗಳಿಗಿಂತಲೂ ಉನ್ನತವಾಗಿ ಕಾಣಬೇಕು. ಆ ಗ್ರಹದ ಸ್ಥಾನದ ಮೇಲೆ ಒಂದು ಊರ್ಧ್ವರೇಖೆ (ಉದ್ದಗೆರೆ) ಇರಬೇಕು. ಅದರ ಜಾಗಕ್ಕೆ ಅಡ್ಡಗೆರೆಗಳಿರ ಬಾರದು. ಚಾಪೆಯ ರೀತ್ಯ ಗೆರೆಗಳು ಕಾಣಬಾರದು. ಛತ್ರ, ಚಾಮರ, ತಟಾಕ, ಕಮಲ, ತ್ರಿಕೋಣ, ರವಿ, ಚಂದ್ರ, ಗುರು, ಶುಕ್ರ, ಬುಧ ಮುಂತಾದ ಶುಭ ಚಿಹ್ನೆಗಳಿರಬೇಕು. ಆಗ ಆ ಗ್ರಹವೇ ನಿಮ್ಮ ಭವಿಷ್ಯತ್ ನಿರ್ಧಾರಕ ಗ್ರಹವೆಂದಾ ಯಿತು. ನಿಮ್ಮ ಭಾಗ್ಯದ ಬಾಗಿಲು ತೆರೆಯಲು ಅದಕ್ಕೆ ಸಂಬಂಧಿಸಿದ ರತ್ನ ಧರಿಸಿ, ಅದೃಷ್ಟಶಾಲಿಗಳಾಗಬಹುದು.

ಮತ್ತೂ ಹೆಚ್ಚಿನ ವಿಷಯವೆಂದರೆ ಸಾಮುದ್ರಿಕಾ ಪರಿಣಿತನಿಗೆ ಸಂಹಿತೆಗಳ ಪರಿಚಯವಿದ್ದರೆ ನಿಮ್ಮ ಜನನ ಕಾಲ ಕುಂಡಲಿಯನ್ನೂ ಸೂಚಿಸಿ ನಿಮ್ಮ ಲಗ್ನವಾವು ದೆಂದು ತಿಳಿಸಿ ನಿಮ್ಮ ಶುಭಪ್ರದ ರತ್ನ, ಸಿದ್ಧಿರತ್ನ ಯಾವುದೆಂದು ಖಚಿತವಾಗಿ ತಿಳಿಸಬಲ್ಲ.

**ರತ್ನಗಳನ್ನು ಧರಿಸುವಾಗ :**

1) ಮುತ್ತುಗಳಿಗೆ ರಂಧ್ರ ಮಾಡಿ ಉಪಯೋಗಿಸಿದರೆ ನಿಷ್ಫಲ.
2) ಕಾಂತಿಹೀನ, ಮಲಿನ, ದಗ್ಧರತ್ನಗಳ ಬಳಕೆ ಅಶುಭ ಫಲಗಳನ್ನುಂಟು ಮಾಡುವುದು.
3) ಕಾಗೆಯ ಪಾದ ಗುರುತಿರುವ, ಗೆರೆಗಳುಳ್ಳ, ಸರಿಯಾದ ಆಕಾರವಿಲ್ಲದ ರತ್ನಗಳನ್ನು ಬಳಸಬಾರದು. ಇದು ದರಿದ್ರರನ್ನಾಗಿಯೂ, ರೋಗಿಗಳ ನ್ನಾಗಿಯೂ ಪರಿವರ್ತಿಸುವುದು.
4) ನೈಜ (ಸ್ವಾಭಾವಿಕ) ರತ್ನಗಳು ದೊರೆಯದಿದ್ದಾಗ ಉಪರತ್ನ ಇಲ್ಲವೆ ಕೃತಕ ರತ್ನಗಳೂ ಸಾಮಾನ್ಯ ಫಲಕಾರಿಯೆ.
5) ಗಾಜು, ಪ್ಲಾಸ್ಟಿಕ್‌ಗಳಿಂದ ತಯಾರಿಸಿದ ಕೃತಕ ರತ್ನಗಳಂತೆ ಕಾಂತಿ ಇರು ವವು ನಿಷ್ಫಲದಾಯಕ.

6) ಯಾವುದೇ ರತ್ನ ಧರಿಸಲು ನಿಮ್ಮ ಜನ್ಮ ನಕ್ಷತ್ರ ಅಥವಾ ಹೆಸರಿಗೆ ತಾರಾಬಲವಿರುವ ದಿನವೇ ಧರಿಸಬೇಕು.

7) ಯಾವುದೇ ತಿಂಗಳ ಕೃಷ್ಣಪಕ್ಷದಲ್ಲಿ ರತ್ನಧಾರಣೆ ಮಾಡಬಾರದು.

8) ರತ್ನ ಹೆಚ್ಚು ಫಲಕಾರಿಯಾಗಲು ಕ್ಷೀರದಿಂದ ತೊಳೆದು (ಹಾಲಿನಿಂದ) ನಿಮ್ಮ ಮನೆಯ ದೇವರ ಮುಂದೆ ಪೂಜಿಸಿ ಧರಿಸಿದರೆ ಉತ್ತಮ.

9) ರಾಹುಕಾಲ, ಯಮಗಂಡ ಕಾಲಗಳಲ್ಲಿ ರತ್ನಧಾರಣೆ ಕೂಡದು.

10) ಕೂದಲಿನಂತೆ ಗೆರೆ ಇರುವ, ಸೀಳುಬಿಟ್ಟಿರುವ ರತ್ನವನ್ನು ಧರಿಸಬೇಡಿ.

11) ಯಾವ ಗ್ರಹದ ರತ್ನ ಧರಿಸಬೇಕೋ ಆ ಗ್ರಹದ ವಾರ ದಿನವನ್ನೆ ಗೊತ್ತುಪಡಿಸಿಕೊಳ್ಳಬೇಕು.

12) ರತ್ನಧಾರಣೆ ರಿಕ್ತ ಹಾಗೂ ಶೂನ್ಯ, ತಿಥಿಗಳಂದು ಕೂಡದು.

13) ಸಾಮಾನ್ಯವಾಗಿ ರತ್ನಧಾರಣೆಯೆಂದು ಬ್ರಾಹ್ಮೀ ಮುಹೂರ್ತವೇ ಉತ್ತಮ ಫಲ ನೀಡಬಲ್ಲದು.

14) ರತ್ನಶಾಸ್ತ್ರ ಪರಿಚಯುವಿರುವ ಜ್ಯೋತಿಷಿಯ ಸಲಹೆ ಇಲ್ಲದೆ ರತ್ನಧಾರಣೆ ಮಾಡಿದರೆ ನಿಮ್ಮ ಜೀವನವನ್ನು ಅಸ್ತವ್ಯಸ್ತಗೊಳಿಸೀತು.

15) ಮುತ್ತುಗಳು ಯಾವ ಸ್ತ್ರೀಗೂ (ಕುಂಭರಾಶಿಯವರಿಗೆ ಬಿಟ್ಟು) ವಿರೋಧವಾಗಿ ಫಲ ಕೊಡುವುದು ಕಂಡುಬಂದಿಲ್ಲ.

**ಉಪರತ್ನ–ಕೃತಕಗಳು :**

ಇವುಗಳ ಬೆಲೆಯೂ ಕಡಿಮೆ : ಫಲವೂ ಕಡಿಮೆ, ಆದರೂ ಉಪಯೋಗದಲ್ಲಿವೆ. ಸುಮಾರು 10 ರೂ. ಗಳಿಂದ 70–80 ರೂ. ಗಳಲ್ಲಿ ದೊರಕುವುದು.

1) ಕಟೀಲ (Amethyist) 2) ಅಕೀಕ್ (Aqiq) 3) ಪಿತ್ತೋನ (Blood Stone) 4) ರತ್ತ 5) ಬೆರುಂಜ್ 6) ತಮ್ದ 7) ಲಾಜ್‌ವ್ರತ್ 8) ಚಂದ್ರಮಣಿ 9) ಹಿರಾತ್‌ಮಣಿ 10) ಫಿರಂಗ (ದಹನೆಯ) ಇವುಗಳು ಉಪರತ್ನಗಳು. ಮೂಲರತ್ನಗಳು ದೊರಕದಾಗ ಇವುಗಳನ್ನು ಬಳಸಬಹುದು.

# ಉಪರತ್ನಗಳು-ಅವುಗಳ ವೈಶಿಷ್ಟ್ಯ-7

ನವರತ್ನಗಳಂತೆಯೇ ಭೂಮಿಯಲ್ಲಿ ಸಿಗುವ ಉಪರತ್ನಗಳು ಹಲವಾರು. ಅವುಗಳ ಉತ್ಪತ್ತಿಗೂ ಹಾಗೂ ವಿಭಿನ್ನತೆ ಗುಣಗಳಿಗೂ ರಾಸಾಯನಿಕ ಸಂಜೋಡನೆಯ ವ್ಯತ್ಯಯವೇ ಕಾರಣ. ನವರತ್ನಗಳಂತೆ ಸರಿಸಮವಾಗಿ ಪ್ರಭಾವ ಬೀರಬಲ್ಲ ಶಕ್ತಿ ಇವುಗಳಿಗಿಲ್ಲವಾದರೂ ಸುಲಭ ಬೆಲೆಗೆ ದೂರಕುವ ಈ ರತ್ನಗಳು ಇಂದು ಹೇರಳವಾಗಿ ಬಳಕೆಯಲ್ಲಿವೆ. ಈ ಉಪರತ್ನಗಳಲ್ಲಿ ಅತಿ ಮುಖ್ಯವೆನಿಸಿದ 25 ವಿಧ ರತ್ನಗಳ ವಿಶಿಷ್ಟ ಗುಣ ಪ್ರಭಾವಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

### ಉಪರತ್ನಗಳು ಯಾವುವು ?

1. ಫಿರೋಜ್-ಸಮೇಧಾ (Turquoise)
2. ಅಕೀಕ್ (Agate)
3. ಬೇರುಂಜ್-ಗುರುತ್ಮಣಿ (Aquamarine)
4. ಅಂಬರ್-"ಶಿಲಾರಾಳ" (Amber)
5. ಕಟೇಲಾ-ಜಮುನಿಯ (Amethyst)
6. ಬೆರಿಲ್ (Beryl)
7. ಅಲೆಕ್ಸಾಂಡ್ರೈಟ್ (Alexandrite)
8. ಲಹಸಾನ್ಯ (Chrysoberyl)
9. ಕ್ರೈಸೋಫ್ರೇಸ್ (Chrysoprase)
10. ಕೋರಂಡಂ-ಕುರಂಡ (Corundum)
11. ಕಾರ್ನೆಲಿಯನ್ (Carnelian)
12. ಜೇಡ್ (Jade)
13. ಜೆಟ್ (Jet)
14. ಜರ್ಕಾನ್ (Jircon or Jacinth)
15. ಓನಿಕ್ಸ್ (Onyx)
16. ಚಂದ್ರಕಾಂತಮಣಿ (Moon Stone)
17. ಗಿರಾತಮಣಿ (Peridot)
18. ಪಿತ್ಯೋನ (Jasper)
19. ಕ್ವಾರ್ಟ್ಜ್-ಬೆಣಚುಶಿಲೆ (Quartz)

20. ದೂದಿಯ-ಕ್ಷೀರಸ್ಫಟಿಕ (Qpal)
21. ಲಾಜ್‌ವರ್ದ್ (Lapis-Lazuli)
22. ತಮ್ಮ (Garnet)
23. ವೈಕ್ರಾಂತ್ (Tourmaline)
24. ಸ್ಫಟಿಕಮಣಿ (Rock Crystal)
25. ದುನ್ನೈಲ (Smokey Topaz)

## ಉಪರತ್ನಗಳ ಪ್ರಭಾವ

### 1. ಫಿರೋಜ್ (Turquoise)

ಇದು ಹಸಿರು ಮತ್ತು ನೀಲಿ ಮಿಶ್ರಿತ ವರ್ಣವುಳ್ಳದ್ದು. ಪಿಂಗಾಣಿಯಂತೆ ಇದು ವಕ್ರವಾಗಿ ಚೂರಾಗುವುದು. ಸ್ನಾನ ಮಾಡುವಾಗ ಇದನ್ನು ಧರಿಸಿದರೆ ವರ್ಣ ಹೀನವಾಗುವುದು. ಇದಕ್ಕೆ ಕಾರಣ ಸಾಬೂನಿನಲ್ಲಿರುವ ರಾಸಾಯನಿಕ ವಸ್ತುಗಳು. ಇದರಲ್ಲಿ ಫಾಸ್‌ಫೆರಿಕ್ ಆಮ್ಲ (Phospheric Acid) ಅಲ್ಯೂಮಿನಿ ತಾಮ್ರದ ಆಕ್ಸೈಡ್ ಹಾಗೂ ಜಲ ಸಂಯೋಜಿತವಾಗಿದೆ. ಅತಿಯಾದ ಶಾಖಕ್ಕೆ ಇದು ಒಡೆದು ಸೀಳಲ್ಪಡುವುದು. ಪರ್ಷಿಯಾ ದೇಶದಲ್ಲಿ ಇದು ವಿಪುಲವಾಗಿ ಲಭ್ಯ. ಸಂಸ್ಕೃತ ಭಾಷೆಯಲ್ಲಿ ಈ ಉಪರತ್ನಕ್ಕೆ "ಸುಮೇಧಾ" ಎಂದು ಕರೆಯುತ್ತೇವೆ, ಇದು ಗಣಿಗಳಲ್ಲಿ ದೊರಕುವ ಉಪರತ್ನ.

**ಬಳಕೆ** : ಆಕಸ್ಮಿಕ ಅಪಘಾತಗಳಿಂದ ರಕ್ಷಣೆ ಪಡೆಯಲು ವೀರ್ಯವೃದ್ಧಿ ಆಯುವೃದ್ಧಿಗೂ. ಮಂತ್ರಸಿದ್ಧಿ ಮತ್ತು ಜ್ಞಾಪಕಶಕ್ತಿಗೂ ಸ್ತ್ರೀಯರಲ್ಲಿ. ಗರ್ಭೋತ್ಪತ್ತಿಗೂ ಇದರ ಧಾರಣೆ ಪ್ರಯೋಜನಕಾರಿ ಎಂದು ಹೇಳಲಾಗಿದೆ. ಧರಿಸಲು ನಿರ್ದಿಷ್ಟ ತೂಕ ಎಷ್ಟೆಂದು ತಿಳಿಸಿಲ್ಲ. ಆದ್ದರಿಂದ ಅನುಕೂಲ-ಸೌಲಭ್ಯ ಗಳಿಗೆ ತಕ್ಕಂತೆ ಇದನ್ನು ಧರಿಸಬಹುದಾಗಿದೆ.

### 2. ಅಕೀಕ್ (Agate)

ಇದು ಭಾರತದ ನಾನಾ ನದಿಗಳ ತೀರದಲ್ಲಿ ಸುಲಭವಾಗಿ ದೊರಕುವ ರತ್ನ. ಅನೇಕ ವರ್ಣ ಮಿಶ್ರಿತವಾದದ್ದು. ಸಾಮಾನ್ಯವಾಗಿ ಬಿಳಿ-ಉದಾ, ಮಿಶ್ರ ವರ್ಣ ಗಳಲ್ಲಿ ದೊರಕುವುದು. ಈ ಉಪರತ್ನದಲ್ಲಿ ಕಬ್ಬಿಣದ ಆಕ್ಸೈಡ್ ಅಥವಾ ಮ್ಯಾಂಗನೀಸ್ ಆಕ್ಸೈಡ್ ಇರುತ್ತದೆ. ಇದರ ಘಡಸು 6.5 ಸಾಪೇಕ್ಷ ಸಾಂದ್ರತೆ 2.7 ಸುಲಭವಾಗಿ ಒಡೆದುಹೋಗುವ ರತ್ನವಲ್ಲ, ಸೂಕ್ಷ್ಮ ರಂಧ್ರಯುಕ್ತವಾದ ಈ ರತ್ನಕ್ಕೆ ಕೃತಕ ಆಕರ್ಷಕ ಬಣ್ಣವನ್ನು ತುಂಬಲು ಸಾಧ್ಯವಿದೆ.

**ಬಳಕೆ :** ದೃಷ್ಟಿದೋಷ ನಿವಾರಣೆಗೆ, ಬಲವೃದ್ಧಿಗೆ, ಸಂಪದಭಿವೃದ್ಧಿಗೆ ಇದರ ಧಾರಣೆ ಸಹಕಾರಿ ಎಂದು ಮುಸಲ್ಮಾನರನೇಕರು ನಂಬಿದ್ದಾರೆ. ಉತ್ತಮ ವಾಗ್ಮಿಗಳಾಗಬಯಸುವವರೂ, ವಾದ ವಿವಾದ ತರ್ಕಗಳಲ್ಲಿ ಜಯಗಳಿಸಲು ಅಪೇಕ್ಷೆಯುಳ್ಳವರೂ ಇದನ್ನು ಧರಿಸಿ ಉತ್ತಮ ಫಲಗಳನ್ನು ಹೊಂದಬಹುದೆಂದು ಹೇಳಲಾಗಿದೆ. ಇದರ ಭಸ್ಮ ಉನ್ಮಾದ ಹುಚ್ಚು ನಿವಾರಣೆಗೂ ಸಹಾಯಕಾರಿ ಎಂದು ತಿಳಿದುಬಂದಿದೆ.

### 3. ಬೇರುಂಜ್ (Aquamarine)

ಇದನ್ನು ಭಾರತೀಯರು "ಗುರುತ್ಮಣಿ" ಹಿಂದಿಯಲ್ಲಿ ಹಿರಾತ್‌ಮಣಿಯೆಂದೂ, ಸಾಮಾನ್ಯರಿಗೆ ಅರಿವಾಗುವ ಭಾಷೆಯಲ್ಲಿ ಬೇರುಂಜ್ ಅಥವಾ ಬೇರುಳ ಎಂದೂ ಕರೆಯುತ್ತಾರೆ. ಹಳದಿ-ನೀಲಿ, ಹಸಿರು-ನೀಲಿ, ಮಿಶ್ರಿತ ವರ್ಣಗಳಲ್ಲಿ ದೊರಕುವುದು ಇದರ ಘಡಸು 7.5 ರಿಂದ 7.8. ಸಾಪೇಕ್ಷ ಸಾಂದ್ರತೆ 2.7. ಇದು ಬ್ರೆಸಿಲ್ ದೇಶದಲ್ಲಿ ವಿಫುಲವಾಗಿ ದೊರೆಯುತ್ತೆ. ಹೆಚ್ಚು ಆಕರ್ಷಕ ಪ್ರಕಾಶಿತವಾದ ಈ ರತ್ನ ಸಿಲಿಕಾ, ಅಲ್ಯೂಮಿನ, ಕಬ್ಬಿಣದ ಆಕ್ಸೈಡ್, ಸೋಡಾ, ಬೆರಿಲಿಯಾ ಹಾಗೂ ಜಲಾಂಶ ಇತ್ಯಾದಿ ರಾಸಾಯನಿಕ ಸಂಯೋಜಕಗೊಂಡು ಉದ್ಭವ. ಒಂದೇ ರತ್ನದಲ್ಲಿ ಹಲವು ವರ್ಣಗಳಿರುತ್ತೆ.

**ಬಳಕೆ :** ಪತಿ-ಪತ್ನಿಯರಲ್ಲಿ ವಿರಸ ಹೋಗಲಾಡಿಸಲು, ಕೋರ್ಟು ಕಛೇರಿ ವಾದ-ವಿವಾದ ಕಾರ್ಯಗಳಲ್ಲಿ ಜಯಗಳಿಸಲು ಇದನ್ನು ಧರಿಸಿದರೆ ಶುಭವೆಂದಿದ್ದಾರೆ.

### 4. ಅಂಬರ್ (Amber)

ಇದನ್ನು "ಶಿಲಾರಾಳ"ವೆಂದು ಕರೆಯುವುದುಂಟು. ಇದು ಭೂಗತ ಗಣಿಯ ರತ್ನವಲ್ಲ. ಸಸ್ಯ ಮರಗಳ ಭೂಗತ ಅವಶೇಷ ಪದಾರ್ಥಗಳ ಸಂಯೋಜಿತವಾಗಿ ಈ ಉಪರತ್ನ ಲಭ್ಯವಾಗುವುದು. ಶಾಖಕ್ಕೆ ಕರಗಲ್ಪಡುವ ಈ ರತ್ನ ಇಂಗಾಲ, ಜಲಜನಕ, ಆಮ್ಲಜನಕಗಳ ಸಮ್ಮಿಶ್ರಣದಿಂದ ಉತ್ಪತ್ತಿ. ಇದು ಭಾರತ, ಚೀನಾ, ಫ್ರಾನ್ಸ್ ದೇಶಗಳಲ್ಲಿ ಹೇರಳವಾಗಿ ಸಿಗುವುದು. ಘಡಸು 2.25, ಸಾಪೇಕ್ಷ ಸಾಂದ್ರತೆ 1.17. ಇದು ಪಾರದರ್ಶಕ ರತ್ನ.

**ಬಳಕೆ :** ಅರಿಶಿನ ಕಾಮಾಲೆ, ಕರುಳಿನಬೇನೆ, ಮೂರ್ಛೆ, ಗಂಡಾಮಾಲೆ ರೋಗಿಗಳು ಧರಿಸಿದರೆ ರೋಗ ಶಮನವಾಗುವುದೆಂದು ಹೇಳುವರು.

### 5. ಜಮುನಿಯ-ಕಟೇಲಾ (Amethyst)

ಇದು ಭೂಮಿಯಲ್ಲಿ ಸಿಗುವ ಖನಿಜ ವಸ್ತು. ಅತ್ಯಂತ ಸುಂದರ ಹೊಳಪಿನ ಈ ರತ್ನ-ಗುಲಾಬಿ ಹೂಬಣ್ಣ ಅಥವಾ ಪಾಟಲವರ್ಣದಲ್ಲಿರುವುದು. ಇದನ್ನು

ಕಟೇಲಾ ಅಥವಾ ಜಮುನಿಯ ಎಂದು ಹಿಂದಿಯಲ್ಲಿ ಕರೆಯುತ್ತಾರೆ. ಇದರ ಬಣ್ಣ ಇತರ ಬಣ್ಣಗಳ ಬೆಳಕಿನ ಕಿರಣಗಳಿಂದ ಮಾರ್ಪಾಡಾಗುವ ಸಾಧ್ಯತೆ ಇದೆ. ಘಡಸು 7. ಸಾಪೇಕ್ಷ ಸಾಂದ್ರತೆ 2.65. ಪಾರದರ್ಶಕ ಪ್ರಕಾಶವುಳ್ಳ ಈ ರತ್ನ ಪ್ರತಿಫಲನ ಹಾಗೂ ವಕ್ರೀಭವನ ಕಿರಣಗಳಿಗೆ ಅವಕಾಶ ಕೊಡುವುದು.

ಈ ರತ್ನದ ಬಗ್ಗೆ ಅನೇಕ ನಂಬಿಕೆಗಳು–ದಂತಕಥೆಗಳು ಇವೆ. ಸೈನಿಕರು ತಮ್ಮ ಪ್ರಾಣ ರಕ್ಷಣೆಗೆ ಬಳಸುವರೆಂದು ತಿಳಿಸಲಾಗಿದೆ. ಇದನ್ನು ಮಾದಕ ಪೇಯ ಗಳನ್ನು ಕುಡಿಯುವವರು ಧರಿಸುವುದರಿಂದ ಪೇಯದ ಅಮಲಿನ ಪ್ರಭಾವ ಕಡಿಮೆಯಾಗಿ ದೋಷ ನಿವಾರಣೆಯಾಗುವುದೆಂದು ಇಂದಿಗೂ ಉಪಯೋಗಿಸುವರು. (Prevents from intoxication) ಕ್ಷಿಯೋಪಾತ್ರಳೂ ಇದರ ಉಂಗುರ ಧರಿಸಿದ್ದಳೆಂದು ಪ್ರತೀತಿ ಇದೆ.

**ಬಳಕೆ :** ಪ್ರಯಾಣದಲ್ಲಿ ಉಂಟಾಗುವ ಅಪಘಾತಗಳಿಂದ ರಕ್ಷಣೆಗೂ, ರಾತ್ರಿ ಕುರುಡುತನ ನಿವಾರಣೆಗೂ, ಉನ್ಮಾದ, ಕಿವುಡು ಮತ್ತು ಲಕ್ವಾ ರೋಗಗಳ ತಡೆಗೂ ಇದನ್ನು ಧರಿಸಲು ಸೂಚಿಸಲಾಗುವುದು. ಸ್ತ್ರೀಯರ ಋತು ದೋಷಗಳಲ್ಲೂ, ಅಂಗದುರ್ಬಲತೆಯಿಂದುಂಟಾಗುವ ನೋವುಗಳನ್ನು ನಿವಾರಿಸಲು ಹಾಗೂ ಚರ್ಮ ರೋಗ, ರಕ್ತದೋಷ ನಿವಾರಣೆಗಳಲ್ಲೂ ಇದನ್ನು ಬಳಸಲಾಗುವುದು. ಕೋರ್ಟು ವ್ಯವಹಾರ, ಜೂಜು ಇತ್ಯಾದಿಗಳಲ್ಲಿ ಜಯಗಳಿಸಲು ಉಪಯೋಗಿಸಲು ಸಲಹೆ ಇದೆ.

## 6. ಬೆರಿಲ್ (Beryl)

ಇದು ಪಚ್ಚೆಯ ಜಾತಿಗೆ ಒಳಪಟ್ಟ ರತ್ನ. ಹಸಿರು ವರ್ಣವುಳ್ಳದ್ದು. ಇದರಲ್ಲಿ ಅಲ್ಯೂಮಿನಂ ಸಿಲಿಕೇಟ್ ಮತ್ತು ಬೆರಿಲಿಯಂ ಸಿಲಿಕೇಟ್ ಮತ್ತು ಅಲ್ಯೂಮಿನಂ ಆಕ್ಸೈಡ್‌ಗಳ ರಾಸಾಯನಿಕ ಸಂಜೋಡಣೆಯಿಂದ ಇದರ ಉತ್ಪತ್ತಿ. ಇದು ಭೂಗರ್ಭದ ಖನಿಜಕ್ಕೆ ಸಂಬಂಧಿಸಿದ ಉಪರತ್ನ. ಘಡಸು 7 ರಿಂದ 8. ಸಾಪೇಕ್ಷ ಸಾಂದ್ರತೆ 2.7. ಇದರಲ್ಲಿ ಕೆಲವು ಜಾತಿಯವು ತಿಳಿಹಸಿರು, ತಿಳಿನೀಲ, ತಿಳಿಹಳದಿ ಇತ್ಯಾದಿ ವರ್ಣಗಳಲ್ಲಿರುವುದೂ ಉಂಟು.

**ಬಳಕೆ :** ನರಗಳ ನಿಶ್ಶಕ್ತಿ ನಿವಾರಿಸಲು, ಅತಿ ಕಾಮವನ್ನು ತಡೆಯಲು, ವಾಮಾಚಾರಾದಿ ದುಷ್ಕೃತ್ಯಗಳಿಂದ ದೂರವಿರಲು, ಜ್ವರವನ್ನು ನಿವಾರಿಸಲು ಇದನ್ನು ಧರಿಸಲು ಸಲಹೆ ಮಾಡಬಹುದು.

## 7. ಅಲೆಕ್ಸಾಂಡ್ರೈಟ್ (Alexandrite)

ಇದು ಭೂಗರ್ಭದಲ್ಲಿ ದೊರೆಯುವ ಲೋಹ ಸಂಬಂಧಿತವಾದ ಒಂದು ಉತ್ತಮ ಉಪರತ್ನವಿದೆ. ಇದರಲ್ಲಿ ಸಿಲಿಕಾ, ಕಬ್ಬಿಣದ ಆಕ್ಸೈಡ್, ಸೋಡಾ,

ಮೇಗ್ನೀಸಿಯಂ ಹಾಗೂ ಜಲ ಸಂಯೋಗವಿದೆ. ಘಡಸು ಸುಮಾರು 7. ಸಾಪೇಕ್ಷ ಸಾಂದ್ರತೆ 3.26. ಇದು ಶ್ರೀಲಂಕಾದಲ್ಲಿ ಹೇರಳವಾಗಿ ದೊರಕುವುದು. ಇದು ನೋಡಲು ಬೆಕ್ಕಿನ ಕಣ್ಣಿನಂತೆಯೇ ಇರುವುದು,

**ಬಳಕೆ :** ಭವಿಷ್ಯ ನುಡಿಯುವವರು, ತ್ರಿಕಾಲ ಜ್ಞಾನಿಗಳು ಇದರ ಉಪಯುಕ್ತತೆ ತಿಳಿದಿರುವರು.

## 8. ಲಹಸಾನ್ಯೆ (Chrysoberyl)

ಇದೂ ಮೇಲಿನ ಅಲೆಕ್ಸಾಂಡ್ರೈಟ್‌ನಂತೆಯೇ ಇರುವ ಉಪರತ್ನ. ಇದರ ಮಧ್ಯದಲ್ಲಿ ಪ್ರಕಾಶಮಾನವಾದ ಬೆಳ್ಳಗಿರುವ ರೇಖೆ ಸ್ಪಷ್ಟವಾಗಿ ಕಾಣಿಸುವುದು. ಇದರಲ್ಲಿ ಗ್ಲೂಸಿನ, ಅಲ್ಯೂಮಿನಂ ಇತ್ಯಾದಿ ರಾಸಾಯನಿಕ ವಸ್ತುಗಳಿವೆ. ಇದು ಅಪಾರದರ್ಶಕ. ಸ್ವಚ್ಛ ಹಸಿರು, ಉದಾ ಮಿಶ್ರಿತ ವರ್ಣವುಳ್ಳದ್ದು. ಘಡಸು 8.5 ಸಾಪೇಕ್ಷ ಸಾಂದ್ರತೆ ಸುಮಾರು 3.7. ಇದನ್ನು ಬೆಕ್ಕಿನಕಣ್ಣು ಎಂದು ಕರೆಯುವರು, ಇದು ಶ್ರೀಲಂಕಾ ದ್ವೀಪದಲ್ಲಿ ಸಿಗುವುದು.

**ಬಳಕೆ :** ಇದನ್ನು ಗೂರಲು, ದಮ್ಮು ರೋಗಿಗಳು ಧಾರಣೆ ಮಾಡುವುದರಿಂದ ಉತ್ತಮ ಫಲ ದೊರಕುವುದೆಂದಿದ್ದಾರೆ.

## 9. ಕ್ರೈಸೋಫ್ರೇಸ್ (Chrysoprese)

ಇದು ಪಚ್ಚೆಯಂತೆಯೇ ಭಾರತದ ಗಣಿಗಳಲ್ಲಿ ಸಿಗುವ ಉಪರತ್ನ. ಇದು ಹಸಿರು ಬಣ್ಣವುಳ್ಳದ್ದು. ಘಡಸು 7.8. ಸಾಪೇಕ್ಷ ಸಾಂದ್ರತೆ 2.65.

**ಬಳಕೆ :** ಇದು ಉತ್ತೇಜಕ ಅಥವಾ ಉದ್ದೀಪಕ ಹಾಗೂ ವಾತರೋಗ ನಿವಾರಕವೆಂದು ತಿಳಿಸಲಾಗಿದೆ. ಮೂತ್ರರೋಗದಲ್ಲಿ ಇದನ್ನು ಬಳಸುವುದುಂಟು.

## 10. ಕೋರಂಡಂ (Corundum)

ಇದನ್ನು ತಮಿಳು ಭಾಷೆಯಲ್ಲಿ "ಕುರುಂಡಂ" ಎನ್ನುವರು. ಇದು ಕೆಂಪು ವರ್ಣದಲ್ಲಿರುವುದು. ಇದರಲ್ಲಿ ಅನೇಕ ವಿಧಗಳು ಇವೆ. ಘಡಸು 9. ಸಾಪೇಕ್ಷ ಸಾಂದ್ರತೆ 4. ಆಮ್ಲಗಳು ಇದರ ಮೇಲೆ ಪ್ರಭಾವ ಬೀರಲಾರವು. ಬರ್ಮಾ ದೇಶದಲ್ಲಿ ಇದು ಸಿಗುತ್ತವೆ. ಇದರಲ್ಲಿ ಹೆಚ್ಚು ಭಾಗ ಅಲ್ಯೂಮಿನಂ ಇದೆ. ಇದು ಪ್ರಕಾಶಮಾನವಾದ ಭೂಮಿಯಲ್ಲಿ ದೊರಕುವ ಉಪರತ್ನ,

**ಬಳಕೆ :** ಇದನ್ನು ಮಾಣಿಕ್ಯಕ್ಕೆ ಬದಲಾಗಿ ಉಪಯೋಗಿಸುವರು. ಉಪಯೋಗಕ್ಕೆ ಮಾಣಿಕ್ಯಕ್ಕೆ ಕೊಟ್ಟಿರುವ ವಿಚಾರವನ್ನೇ ಓದಿಕೊಳ್ಳಿ.

## 11. ಕಾರ್ನೇಲಿಯನ್ (Carnelian)

ಕೆಂಪು ವರ್ಣವುಳ್ಳ ಈ ಪಾರದರ್ಶಕ ಪ್ರಕಾಶಿತ ರತ್ನ ಶಾಖಕ್ಕೆ ಒಳಪಡಿಸಿದಾಗ ಹೆಚ್ಚು ಹೊಳಪನ್ನು ಪಡೆಯುವುದು. ಇದರ ಘಡಸು 6.5. ಸಾಪೇಕ್ಷ ಸಾಂದ್ರತೆ 2.6. ಹವಳಕ್ಕೆ ಬದಲಾಗಿ ಇದನ್ನು ಬಳಸಬಹುದಾಗಿದೆ.

**ಬಳಕೆ :** ಇದರ ಧಾರಣೆಯಿಂದ ಸಂಪದಭಿವೃದ್ಧಿ, ವಾಕ್ಸಿದ್ಧಿ, ಮಾನಸಿಕ ತೃಪ್ತಿಯನ್ನು ಹೊಂದಬಹುದೆಂದು ಹೇಳಲಾಗಿದೆ. ಮುಸ್ಲಿಮರ ವಿಶ್ವಾಸ ಹಾಗೂ ವಿಶೇಷ ಬಳಕೆಯನ್ನೀಯುವ ಈ ಉಪರತ್ನ ಗ್ರಂಥಿರೋಗ, ನಾಸಿಕದಲ್ಲಿ ರಕ್ತಸ್ರಾವ, ಕೆಲವು ರೀತಿಯ ಜ್ವರಗಳನ್ನು ನಿವಾರಿಸಲು ಉಪಯುಕ್ತವೆಂದು ತಿಳಿದುಬಂದಿದೆ. ಕಂಠಗ್ರಂಥಿ ದೋಷನಿವಾರಣೆಗೂ ಮಾತಿನ ಉಚ್ಚಾರಣೆಗಳಲ್ಲುಂಟಾಗುವ ತಡೆಗೂ ಸ್ವರಶುದ್ಧಿಗಾಗಿಯೂ ಇದರ ಧಾರಣೆ ಉತ್ತಮ ಗುಣಕಾರಿಯೆಂದು ಕಂಡು ಬಂದಿದೆ.

## 12. ಜೇಡ್ (Jade)

ಪಚ್ಚೆಯಂತೆಯೇ ಹಸಿರು ವರ್ಣವುಳ್ಳ ಉಪರತ್ನ "ದಹನಯ ಫಿರಿಂಗ್" ಎಂದು ಕರೆಯಲ್ಪಡುತ್ತದೆ. ಕಪ್ಪು, ಕಪ್ಪು ಮಿಶ್ರಿತ ಹಸಿರು ವರ್ಣಗಳುಳ್ಳ ಈ ರತ್ನದ ಘಡಸು 6.5. ಸಾಪೇಕ್ಷ ಸಾಂದ್ರತೆ 3. ಇದು ಸಿಲಿಕಾ, ಮ್ಯಾಗ್ನೀಷಿಯಾ ಕಬ್ಬಿಣದ ಆಕ್ಸೈಡ್ ಅಲ್ಯೂಮಿನಿಸ ಹಾಗೂ ಜಲಾಂಶವುಳ್ಳ ಉಪರತ್ನವಾಗಿದೆ. ಮೂತ್ರ ಜನಕಾಂಗ ದೋಷಗಳನ್ನು ನಿವಾರಿಸುವಲ್ಲಿ ಅತ್ಯುಪಯುಕ್ತ ರತ್ನವೆಂದು ಅರಿತ ಗ್ರೀಕ್ ಜನಾಂಗದವರು ಇದನ್ನು ಜೇಡ್ (Jade) ಎಂದು ಕರೆಯಲು ಕಾರಣವಾಯ್ತು. ಆಂಗ್ಲರು ಇದನ್ನು "ಕಿಡ್ನಿಸ್ಟೋನ್" ಎಂದು ಕರೆಯುವುದೂ ವಾಡಿಕೆಯಲ್ಲಿದೆ.

**ಬಳಕೆ :** ಮೂತ್ರಕೃಚ್ಛ, ಮೂತ್ರದ ದ್ವಾರದಲ್ಲಿ ಉರಿ, ಮೂತ್ರ ಜನಕಾಂಗದ ವಿಕಾರತೆಯಿಂದಾಗಿ ಧರಿಸಲು ಉಪಯುಕ್ತ ರತ್ನವೆನ್ನಬಹುದು.

## 13. ಜೆಟ್ (Jet)

ಇದು ಲೋಹ ಸಂಯೋಜಿತ ಪ್ರಕಾಶಮಾನವಾದ ಉಪರತ್ನವಾಗಿದೆ. ಇದರ ವರ್ಣ ಕಪ್ಪು ಮತ್ತು ಅದರೊಟ್ಟಿಗೆ ಮಿಶ್ರಿತ ವರ್ಣಗಳು. ಘಡಸು 4.5. ಸಾಪೇಕ್ಷ ಸಾಂದ್ರತೆ 1.35.

**ಬಳಕೆ :** ಸರ್ಪದಂಶ, ವಿಷಜಂತುಗಳ ಕಡಿತವಾದಾಗ ಧರಿಸಲು ಗುಣಕಾರಿಯಾಗಿ ಕಂಡುಬಂದಿದೆ.

## 14. ಜಿರ್‌ಕಾನ್ (Zircon)

ಪಾರದರ್ಶಕವುಳ್ಳ ಈ ರತ್ನ ಗೋಲಿಗಳ ರೂಪದಲ್ಲಿ ಶ್ರೀಲಂಕಾ ದೇಶದಲ್ಲಿ ವಿಶೇಷವಾಗಿ ದೊರಕುವುದು. ಇದರ ಘಡಸು 7.5. ಸಾಪೇಕ್ಷ ಸಾಂದ್ರತೆ ಸುಮಾರು 4.5. ವಜ್ರಕ್ಕೆ ಬದಲಾಗಿ ಇದನ್ನು ಉಪಯೋಗಿಸಬಹುದು. ವಜ್ರದಂತೆಯೇ ಕಠಿಣ ವಾದ ಈ ರತ್ನ ರಾಸಾಯನಿಕ ಸಂಯೋಜನೆಯಲ್ಲೂ ಅದರ ಹೋಲಿಕೆಯುಳ್ಳದ್ದು.

**ಬಳಕೆ :** ಅಜೀರ್ಣ, ಮಂದಜ್ವರ, ಹೊಟ್ಟೆಯುಬ್ಬರ, ಯಕೃತ್ ವಿಕಾರಗಳಿ ರುವಾಗ ಇದನ್ನು ಧರಿಸಿದಲ್ಲಿ ಉತ್ತಮ ಗುಣಕಾರಿ.

## 15. ಓನಿಕ್ಸ್ (Onyx)

ಇದು ಹಸಿರು ವರ್ಣದ ಉಪರತ್ನ. ಪಚ್ಚೆಗೆ ಬದಲಾಗಿ ಇದನ್ನು ಧರಿಸಬಹು ದಾಗಿದೆ. ಇದು ಪದರ ರೂಪದಲ್ಲಿ ಶಿಲೆಗಳಂತೆ ದೊರಕುವುದು.

**ಬಳಕೆ :** ಪಚ್ಚೆಗೆ ಬದಲಾಗಿ ಇದನ್ನು ಉಪಯೋಗಿಸಬಹುದು. ವಾಗ್ಮಿ, ಭಾಷಣಕಾರರಿಗೆ ಹೆಚ್ಚು ಪ್ರಭಾವಿ ರತ್ನವೆಂದು ತಿಳಿದುಬಂದಿದೆ. ವೈವಾಹಿಕ ಜೀವನ ದಲ್ಲಿ ಏರುಪೇರುಂಟಾದಾಗಲೂ ಇದನ್ನು ಧರಿಸಿ ಸೌಹಾರ್ದತೆ, ವಿಶ್ವಾಸ ಪ್ರೇಮ ಗಳನ್ನು ವೃದ್ಧಿಪಡಿಸಿಕೊಳ್ಳಬಹುದೆಂದು ಪ್ರತೀತಿಯೂ ಇದೆ.

## 16. ಚಂದ್ರಕಾಂತಮಣಿ (Moon Stone)

ಪಾರದರ್ಶಕವುಳ್ಳ ಈ ರತ್ನ ಬೂದು ವರ್ಣ, ಶ್ವೇತವರ್ಣವುಳ್ಳದ್ದು. ಇದರ ಘಡಸು 6. ಸಾಪೇಕ್ಷ ಸಾಂದ್ರತೆ 2.6. ಕೆಲವು ಮಿಶ್ರವರ್ಣಗಳಲ್ಲೂ ದೊರಕುವುದು. ಇದು ಚಂದ್ರನಂತೆ ಹೊಳಪಿನ ಹಾಗೂ ವೃತ್ತಾಕಾರಗಳಲ್ಲಿ ಬಳಸಲ್ಪಡುವುದರಿಂದ ಇದನ್ನು ಚಂದ್ರಕಾಂತಮಣಿ ಎಂದು ಕರೆದಿರುವರು. ಇದು ಶ್ರೀಲಂಕಾದಲ್ಲಿ ಹೇರಳವಾಗಿ ದೊರಕುವುದು.

**ಬಳಕೆ :** ಮುತ್ತಿಗೆ ಬದಲಾಗಿ ಇದನ್ನು ಬಳಸಬಹುದಾಗಿದೆ. ಮೂರ್ಛೆ, ಮಾನಸಿಕ ರೋಗಗಳಿರುವವರು, ಉನ್ಮಾದದಿಂದ ನರಳುವವರು ಇದನ್ನು ಧರಿಸಿದರೆ ಉತ್ತಮ ಗುಣವುಳ್ಳದ್ದೆಂದು ಕಂಡುಬಂದಿದೆ. ಇದು ವ್ಯಾಪಾರ, ವ್ಯವಹಾರ ಅಭಿ ವೃದ್ಧಿ ಹಾಗೂ ದಾಂಪತ್ಯ ಜೀವನದಲ್ಲಿ ಸುಖ ಅರಿವಿಗಾಗಿ ಧರಿಸಿದಲ್ಲಿ ಉತ್ತಮ. ಜೂಜು, ಸಟ್ಟಾ ವ್ಯಾಪಾರವಿರುವವರೂ ಜಯಗಳಿಸಲು ಇದನ್ನು ಬಳಸಬಹುದೆಂದು ನಂಬಿಕೆಯಿದೆ, ಇದರ ಇನ್ನೊಂದು ವಿಶೇಷ ಗುಣವೆಂದರೆ ಬೆಲೆಯಲ್ಲಿ ಅತಿ ಕಡಿಮೆ ಇದು ಮಕ್ಕಳಿಗೆ ಧಾರಣೆ ಮಾಡಿಸಿದಲ್ಲಿ ಬಾಲಾರಿಷ್ಟದೋಷ ಹೋಗುವುದೆಂದು ತಿಳಿದುಬಂದಿದೆ. ಇದಲ್ಲದೆ ಮಕ್ಕಳಿಗೆ ಅಪಘಾತ ಭಯಗಳಿಂದ ದೂರವಿರಲು ಇದನ್ನು ಬಳಸಬಹುದು. ನೇತ್ರದೋಷ, ವಾಹನ ಅಪಘಾತ, ಗುಳ್ಳೆಗಳು, ಹೃದಯ

ಏಕಾರ, ಹುಚ್ಚು, ಮಾನಸಿಕ ಭಯ ಇತ್ಯಾದಿಗಳಿಂದ ನರಳುವವರಿಗೆ ಇದರ ಧಾರಣೆ ಬಹು ಉಪಯುಕ್ತ. ಜೂಜು, ಕುದುರೆ ರೇಸು, ಷೇರು ಮಾರುಕಟ್ಟೆ ವ್ಯವಹಾರದಲ್ಲಿ ತೊಡಗಿರುವ ವ್ಯಕ್ತಿಗಳು ಉತ್ತಮ ಫಲಕ್ಕಾಗಿ ಇದನ್ನು ಬಳಸಲು ಸೂಚಿಸಲಾಗಿದೆ.

## 17. ಗಿರಾತ್ಮಣಿ (Peridot)

ಇದು ಹಳದಿ, ಹಸಿರು ಮಿಶ್ರಿತವಾದ ಉಪರತ್ನ. ಇದರಲ್ಲಿ ಸಿಲಿಕಾ, ಮ್ಯಾಗ್ನೀಷಿಯ ಕಬ್ಬಿಣದ ಆಕ್ಸೈಡ್ ಸಂಯೋಜಿತಗೊಂಡಿದೆ. ಘಡಸು ಸುಮಾರು 7. ಸಾಪೇಕ್ಷ ಸಾಂದ್ರತೆ 3.4. ಕೆಂಪು ಮಿಶ್ರ ವರ್ಣಗಳಲ್ಲೂ ದೊರಕುವುದು. ಈಜಿಪ್ಟ್ ಮತ್ತು ಶ್ರೀಲಂಕಾ ದ್ವೀಪದಲ್ಲಿ ಹೇರಳವಾಗಿ ದೊರಕುತ್ತೆ.

**ಬಳಕೆ :** ದಾಂಪತ್ಯ ವಿರಸ ನಿವಾರಣೆ ಹಾಗೂ ಬುದ್ಧಿಶಕ್ತಿ ಉತ್ತೇಜಕವೆಂದು ಪರಿಗಣಿಸಲ್ಪಟ್ಟು ಪಚ್ಚೆಗೆ ಬದಲಾಗಿ ಬಳಸಲ್ಪಡುವುದು.

## 18. ಪಿತ್ತೋನ (Jasper or Blood Stone)

ಇದರ ಮತ್ತೊಂದು ಹೆಸರು "ಬ್ಲಡ್ ಸ್ಟೋನ್" ಎಂದು. ಇದರ ವರ್ಣ ಹಸಿರು ಕೆಲವೊಮ್ಮೆ ಕೆಂಪು ವರ್ಣಗಳದ್ದೂ ಇರಬಹುದು. ಇದು ಭಾರತ ಹಾಗೂ ಇತರ ಪಾಶ್ಚಾತ್ಯ ದೇಶಗಳಲ್ಲಿ ಸಿಗುವುದು. ಇದರ ಘಡಸು 7. ಸಾಪೇಕ್ಷ ಸಾಂದ್ರತೆ 2.65. ಇದರಲ್ಲಿ ಕಬ್ಬಿಣ, ಅಲ್ಯೂಮಿನ, ಆಮ್ಲಜನಕ ಸಿಲಿಕ ಇತ್ಯಾದಿ ಅಂಶಗಳಿವೆ. ಪಾರದರ್ಶಕವಲ್ಲದ ಈ ರತ್ನದ ಮೇಲೆ ಇತರ ಕೆತ್ತನೆ ಕೆಲಸವನ್ನು ಮಾಡಬಹುದಾಗಿದೆ.

ಸೌಂದರ್ಯಕ್ಕಾಗಿ ಉಂಗುರ, ವಿಗ್ರಹಾಲಂಕಾರ, ಕಲಾಕೃತಿಗಳಲ್ಲಿ ಬಳಸಲ್ಪಡುವುದು. ಶ್ವಾಸಕೋಶ ರೋಗಗಳಲ್ಲೂ ವಿಷಜಂತು ಕಡಿತಗಳಲ್ಲೂ, ಜಲಗಂಡವಿರುವವರಿಗೆ ಇದರ ಧಾರಣೆ ಉತ್ತಮ ಫಲ ನೀಡುವುದು.

## 19. ಕಾರ್ಟ್ಸ್ (Quartz)

ಕಬ್ಬಿಣ, ಮ್ಯಾಂಗನೀಸ್, ಅಲ್ಯೂಮಿನ, ಕ್ರೋಮಿಯಂ, ನಿಕ್ಕಲ್ ಇತ್ಯಾದಿ ಲೋಹ ಸಂಯೋಜಿತವಾದ ಶುದ್ಧ ಉಪರತ್ನ ಕ್ವಾರ್ಟ್ಸ್, ಘಡಸು 6.5. ಸಾಪೇಕ್ಷ ಸಾಂದ್ರತೆ 2.6. ಭಾರತದಲ್ಲಿ ಸುಲಭವಾಗಿ ಲಭ್ಯವಿರುವ ಈ ಉಪರತ್ನವನ್ನು (ಬೆಕ್ಕಿನ ಕಣ್ಣು) ವೈಡೂರ್ಯಕ್ಕೆ ಬದಲಾಗಿ ಬಳಸಬಹುದು. ವಿಚಿತ್ರ ವರ್ಣಾಕಾರಗಳಲ್ಲಿ ಲಭಿಸುವ ಈ ಉಪರತ್ನವನ್ನು ನಾನಾ ರೀತಿಯ ಔಷಧಿ ತಯಾರಿಕೆಗೂ ಬಳಸುವರು.

**ಬಳಕೆ :** ತಲೆಭಾರ, ತಲೆತಿರುಗುವಿಕೆ, ರಕ್ತದೋಷ, ಕಣ್ಣಿನ ಉರಿ, ಗಂಟಲು ಹುಣ್ಣು, ಗುಳ್ಳೆಗಳು, ಮೂಲವ್ಯಾಧಿಗೆ ಇದರ ಧಾರಣೆಯಿಂದ ಗುಣಕಾರಿಯೆಂದು

ಹೇಳಲಾಗಿದೆ. ಇದು ಭವಿಷ್ಯ ನುಡಿವ, ಮಾಂತ್ರಿಕರು, ಅಂಜನಾದಿ ಪ್ರಯೋಗಿಸಿದ್ದರೂ-ದಿವ್ಯದೃಷ್ಟಿ ಹೊಂದಲಪೇಕ್ಷಿಸುವವರು ಬಳಸುತ್ತಿರುವ ನಿದರ್ಶನಗಳಿವೆ.

## 20. ದೂದಿಯ (Opal)

ನಾನಾ ವರ್ಣವುಳ್ಳ ಈ ಉಪರತ್ನ ಹೇರಳವಾಗಿ ಆಸ್ಟ್ರೇಲಿಯಾ ಖಂಡದಲ್ಲಿ ದೊರಕುವುದು. ಇದರ ಘಡಸು 6. ಸಾಪೇಕ್ಷ ಸಾಂದ್ರತೆ 2. ಪ್ರಭಾವ ವೈಶಿಷ್ಟ್ಯ ವಿರುವ ಈ ರತ್ನವನ್ನು ಆಂಗ್ಲರು ಹೆಚ್ಚಾಗಿ ಬಳಸುವರು.

**ಬಳಕೆ :** ಹೃದಯ ಉತ್ತೇಜಕ, ದೃಷ್ಟಿದೋಷ ನಿವಾರಕ ಹಾಗೂ ಶುಭಫಲ ಸೂಚಕವೆಂದು ಭಾವಿಸಿರುವರು.

## 21. ಲಾಜ್‌ವರಶ್ (Lapis-Lazuli)

ಲೋಹ ಸಂಯೋಜಿತವುಳ್ಳ ಈ ಉಪರತ್ನ ನೀಲವರ್ಣದ್ದು. ಇದರ ಘಡಸು ಸಾಪೇಕ್ಷ ಸಾಂದ್ರತೆ ಸುಮಾರು 3. ಪಾರದರ್ಶಕವುಳ್ಳ ಈ ಉಪರತ್ನವನ್ನು ಇಂದ್ರನೀಲಕ್ಕೆ ಬದಲಾಗಿ ಬಳಸುವರು.

**ಬಳಕೆ :** ಎಲ್ಲ ರೀತಿಯ ಪಿತ್ತ ವಿಕಾರಗಳನ್ನು ಗುಣಪಡಿಸಲು ಯೋಗ್ಯವೆಂದು ತಿಳಿದುಬಂದಿದೆ. ಕಣ್ಣಿನ ಪೊರೆ, ಮೂಗಿನಲ್ಲಿ ರಕ್ತಸ್ರಾವವನ್ನು ಇದರ ಧಾರಣೆಯಿಂದ ತಡೆಹಿಡಿಯಬಹುದೆಂದು ತಿಳಿದಿದ್ದಾರೆ.

## 22. ತವ್ಡು (Garnet)

ರಕ್ತವರ್ಣ, ನಸ್ಯವರ್ಣ, ಕಪ್ಪುವರ್ಣ ಇತ್ಯಾದಿ ಅನೇಕ ವಿಧವಾದ ಈ ಉಪರತ್ನದ ಘಡಸು 7.5. ಸಾಪೇಕ್ಷ ಸಾಂದ್ರತೆ 4.3. ಸಿಂಹಳ ದ್ವೀಪದಲ್ಲಿ ಹೆಚ್ಚಾಗಿ ಲಭ್ಯ.

**ಬಳಕೆ :** ಹೃದ್ರೋಗವಿರುವವರಿಗೂ, ಪ್ಲೇಗು ಬೇನೆಯಲ್ಲೂ ಇದರ ಬಳಕೆ ಉಪಯುಕ್ತವಾಗಿದೆ. ಇಷ್ಟೇ ಅಲ್ಲದೆ ವಿದ್ಯುತ್ ಹಾಗೂ ಸಿಡಿಲಿನ ಅಪಘಾತಗಳಿಂದ ದೂರವಿರಬಯಸುವವರೂ ಇದನ್ನು ಬಳಸುವಸಲಹೆ ಇದೆ.

## 23. ವೈಕ್ರಾಂತ್ (Tourmaline)

ವಿವಿಧ ವರ್ಣಗಳಲ್ಲಿ ಲಭಿಸುವ ಈ ಉಪರತ್ನ ಭಾರತ, ಬರ್ಮಾ ಮತ್ತು ಸಿಲೋನ್ ದೇಶಗಳಲ್ಲಿ ಲಭಿಸುವುದು. ಇದರ ಘಡಸು ಸುಮಾರು 7. ಪಾರದರ್ಶಕ, ವಕ್ರೀಭವನ ಕ್ರಿಯೆಯುಳ್ಳ ಈ ಉಪರತ್ನ ಮಾಣಿಕ್ಯದ ವರ್ಣವುಳ್ಳದ್ದು ಹಾಗೂ ಸಂಯೋಜಕವುಳ್ಳದ್ದು. ವಜ್ರಗಳಿಗೆ ಬದಲಾಗಿ ಇದನ್ನು ಬಳಸಬಹುದು.

**ಬಳಕೆ :** ಜ್ವರ, ಕುಷ್ಠ, ಉನ್ಮಾದ, ಪ್ರಮೇಹ, ಶ್ವಾಸ, ಶೀತದ ರೋಗ ಗಳಿಂದ ನರಳುವವರು ಇದನ್ನು ಧರಿಸಿದಲ್ಲಿ ಉಪಯುಕ್ತ ಗುಣ ಕಂಡುಬಂದಿದೆ.

## 24. ಸ್ಫಟಿಕಮಣಿ Rock Crystal)

ಇದು ಪೂರ್ಣ ಪಾರದರ್ಶಕ ಶಿಲೆ. ಇದನ್ನು ಅಲಂಕಾರ ಹಾಗೂ ದೈವಿಕ ಕಾರ್ಯಗಳಲ್ಲಿ ಬಳಸುವರು.

**ಬಳಕೆ :** ಇದರಿಂದ ದೇವತಾ ವಿಗ್ರಹಗಳನ್ನು ಮಾಡಿ ಪೂಜಿಸುವ ಕೆಲವರು ಇದರ ಜಪಮಾಲೆಯನ್ನು ಮುತ್ತು ಕಂಠಮಾಲೆಯನ್ನು ದೇಹ ಹಾಗೂ ಆತ್ಮಶುದ್ಧಿ ನೀಡುವುದೆಂದು ನಂಬಿಕೆಯಿಂದ ಧರಿಸುವರು.

## 25. ಧುನ್ನೈಲ (Smoekytopaz)

ಇದರ ರಾಸಾಯನಿಕ ಗುಣಗಳು ಪುಷ್ಪರಾಗ ಹಾಗೂ ಗೋಮೇಧಿಕಾದಂತೆ ಸರಿಹೋಲುವುವು. ಇದನ್ನು ಕೆಲವು ಸಾರಿ ಪುಷ್ಪರಾಗಕ್ಕೆ ಬದಲಾಗಿ ಉಪಯೋಗಿಸು ವರು. ಇದು ಹಳದಿ ಬೂದುವರ್ಣವುಳ್ಳದ್ದು.

**ಬಳಕೆ :** ಪಿತ್ತ, ವಿಕಾರ ಹಾಗೂ ಅತ್ಯುಷ್ಣ ಸಂಬಂಧ ರೋಗಗಳುಳ್ಳವರು ಇದನ್ನು ಧರಿಸಿದರೆ ಉತ್ತಮ ಗುಣ ಕಂಡುಬಂದಿದೆ.

# ಸ್ವಪ್ನದಲ್ಲಿ ರತ್ನಗಳು – 8

ಸ್ವಪ್ನ ಬೀಳುವುದು ಎಲ್ಲರಿಗೂ ಸ್ವಾಭಾವಿಕ. ಸ್ವಪ್ನದಲ್ಲಿ ಎರಡು ವಿಧ. ಶುಭ ಸ್ವಪ್ನಗಳು, ಅಶುಭ ಸ್ವಪ್ನಗಳು. ಶುಭ ಸ್ವಪ್ನಗಳಿಂದ ಶುಭಫಲ. ಅಶುಭ ಸ್ವಪ್ನದಿಂದ ಅಶುಭ ಫಲ. ಇದು ಸ್ವಪ್ನಶಾಸ್ತ್ರ ಪ್ರವೀಣರ ನುಡಿ. ಸ್ವಪ್ನ ಫಲ ಗಳನ್ನು ನೈಜಜೀವನದ ಘಟನೆಗಳಿಗೆ ಹೋಲಿಸುವವರು ಕೇವಲ ಭಾರತೀಯರೇ ಅಲ್ಲ. ಪಾಶ್ಚಾತ್ಯರಲ್ಲೂ ಇದೇ ರೀತಿಯ ನಂಬಿಕೆಗಳು. ಸ್ವಪ್ನಗಳಿಗೆ ಕಾರಣ, ಸ್ವಪ್ನಾನಂತರದ ಫಲಗಳು ಇನ್ನೂ ಮನೋವಿಜ್ಞಾನಿಗಾಗಲಿ, ವೈದ್ಯನಿಗಾಗಲಿ ಬಗೆಹರಿಯದ ಸಮಸ್ಯೆಯೇ ಸರಿ. ಈ ವಿಚಾರದಲ್ಲಿ ಜ್ಯೋತಿಶ್ಶಾಸ್ತ್ರ ಪಂಡಿತರೂ ತಮ್ಮದೇ ಆದ ರೀತಿಯಲ್ಲಿ ಫಲಾಫಲಗಳನ್ನು ನಿರೂಪಿಸಿದ್ದಾರೆ. ಈ ಪ್ರಸ್ತುತ ಲೇಖನ ಸ್ವಪ್ನಶಾಸ್ತ್ರ ಕುರಿತಾದ ಪರಿಪೂರ್ಣ ಫಲ ನಿರ್ಣಯಕ್ಕೆ ಸೀಮಿತವಾದುದಲ್ಲ. ಕೇವಲ ರತ್ನಗಳು ರತ್ನಾಭರಣಗಳ ಸಂಬಂಧಿತ ಸ್ವಪ್ನಫಲ ವಿವರಣೆ ನೀಡುವ ಪ್ರಯತ್ನ ಸ್ವಪ್ನದಲ್ಲಿ ರತ್ನಗಳನ್ನು ಕಂಡಾಗ ಯಾವ ಫಲ ಹೇಗೆ ಎಂಬುದಕ್ಕೆ ಪಾಶ್ಚಾತ್ಯ ಪೌರಾತ್ಯ ಸ್ವಪ್ನ ಫಲ ವಿಚಾರಕರ ದೃಷ್ಟಿಕೋನವೇನು ಎಂಬುದನ್ನು ಇಲ್ಲಿ ತಿಳಿಸಿದ್ದೇವೆ. ಆ ರೀತಿಯು ಸ್ವಪ್ನಗಳುಂಟಾದ ಮೇಲೆ ಅನುಸರಿಸಬೇಕಾದ ಕೆಲವು ನಿಯಮಗಳನ್ನು ಓದುಗರ ಇಚ್ಛೆಯಂತೆ ಕೊಟ್ಟಿದ್ದೇವೆ.

## ವ್ಯಾಸ ಮಹರ್ಷಿ ವಿರಚಿತ ಸ್ವಪ್ನಫಲ ಸಂಗ್ರಹದಲ್ಲಿ ರತ್ನಗಳ ವಿಚಾರ

**ಶ್ಲೋಕ ||** ಮತ್ಸ್ಯಂ ಮಾಂಸಂ ಮೌಕ್ತಿಕಂ ಚಂ ಶಂಖಂ ಚಂದನಹೀರಕಮೌ ।
ಯಸ್ತು ಪಶ್ಯತಿ ಸ್ವಪ್ನಾಂತೇ ವಿಪುಲಂ ಧನಮಾಲಭೇತ್ ॥

**ಅರ್ಥ** : ಮೀನು, ಮಾಂಸ ಮತ್ತು ಶಂಖ, ಚಂದನ, ವಜ್ರ ಇವನ್ನು ಸ್ವಪ್ನದಲ್ಲಿ ನೋಡಿದ ಕೂಡಲೇ ಜಾಗೃತನಾದರೆ ವಿಪುಲ ಧನಲಾಭವಾಗುವುದು.

**ಶ್ಲೋಕ ||** ದಿವ್ಯಾ ಸ್ತ್ರೀ ಸಸ್ಮಿತಾ ವಿಪ್ರಾ ರತ್ನ ಭೂಷಣಭೂಷಿತಾ ।
ಯಸ್ಯ ಮಂದಿರಮಾಯಾತಿ ಸ ಪ್ರಿಯಂ ಲಭತೇ ಧ್ರುವಂ ॥

**ಅರ್ಥ** : ದಿವ್ಯ ಹಾಗೂ ಹಸನ್ಮುಖಳಾದ ಮತ್ತು ರತ್ನಾಲಂಕಾರ ಭೂಷಿತಳಾದ ಬ್ರಾಹ್ಮಣ ಸ್ತ್ರೀಯು ಸ್ವಪ್ನದಲ್ಲಿ ಯಾವಾತನ ಮನೆಗೆ ಬರುವುದನ್ನು ಕಾಣುತ್ತಾನೋ ? ಅವನು ಇಷ್ಟವಾದುದನ್ನು ನಿಶ್ಚಿತವಾಗಿ ಪಡೆಯುವನು.

**ಶ್ಲೋಕ ||** ಸ್ವಪ್ನೇ ದೃಷ್ಟ್ವಾ ಚ ತೀರ್ಥಾನಿ ಸೌದರತ್ನ ಗೃಹಾಣಿ ಚ ।
ಜಯಯುಕ್ತಶ್ಚ ಧನವಾನ್ ತೀರ್ಥಸ್ನಾಯೀ ಭವೇನ್ನರಃ ॥

**ಅರ್ಥ** : ಸ್ವಪ್ನದಲ್ಲಿ ತೀರ್ಥಗಳನ್ನು ಹಾಗೂ ದೊಡ್ಡ ಮತ್ತು ರತ್ನಮಯ ಗೃಹಗಳನ್ನು ನೋಡಿದವನಿಗೆ ಜಯ, ಧನಗಳು ಲಭಿಸುವುವು ಮಾತ್ರವಲ್ಲ, ಅಂತಹ ಪುರುಷನು ತೀರ್ಥ ಸ್ನಾನವನ್ನು ಮಾಡುವನು.

**ಶ್ಲೋಕ ||** ಮುಕ್ತಾಹಾರಂ ಪುಷ್ಪಹಾರಂ ಪುಷ್ಪಮಾಲ್ಯಂಚಂದನಂಚಲಭೇದ್ವ್ರಜ ।
ಸ್ವಪ್ನೇ ದದಾತಿ ವಿಪ್ರಶ್ಚ ತಸ್ಯ ಶ್ರೀ ಸರ್ವತೋಮುಖೀ ॥

**ಅರ್ಥ** : ಸ್ವಪ್ನದಲ್ಲಿ ಬ್ರಾಹ್ಮಣನು ಯಾವಾತನಿಗೆ ಮುತ್ತಿನಹಾರ, ಪುಷ್ಪಮಾಲೆ ಮತ್ತು ಚಂದನವನ್ನು ಪಡೆದುಕೊಂಡು ಕೊಡುತ್ತಾನೋ ಆತನ ಸಂಪತ್ತು ಸರ್ವತೋಮುಖವಾಗಿ ಹೆಚ್ಚುವುದು.

**ಶ್ಲೋಕ ||** ಕುಮಾರೀ ಚಾಷ್ಟವರ್ಷೀಯಾ ರತ್ನಭೂಷಣ ಭೂಷಿತಾ ।
ಯಸ್ಯ ತುಷ್ಟೋ ಭವೇತ್ ಸ್ವಪ್ನೇ ಸ ಭವೇತ್ ಕವಿ ಪಂಡಿತಃ ॥

**ಅರ್ಥ** : ಸ್ವಪ್ನದಲ್ಲಿ ಎಂಟು ವರ್ಷದ ಕುಮಾರಿಯು ರತ್ನ ಹಾಗೂ ಆಭರಣ ಭೂಷಿತಳಾಗಿ ಕಾಣಿಸಿದಾಗ ಸಂತುಷ್ಟನಾದವನು ಕವಿ ಮತ್ತು ಪಂಡಿತನಾಗುವನು.

## ಸ್ವಪ್ನದಲ್ಲಿ ರತ್ನಗಳು – ಪಾಶ್ಚಾತ್ಯ ಸ್ವಪ್ನಶ್ಯಾಸ್ತ್ರ ವಿದ್ವಾಂಸರ ವಿವರಣೆ

### 1. ಅಮೆಥಿಸ್ಟ್ (Amethyst)

ಅಮೆಥಿಸ್ಟ್‌ನ ಉಂಗುರ, ಆಭರಣ, ಕಂಠಾಭರಣ ಅಥವ ಚೈನನ್ನು ಯಾರಿಂದಲಾದರು ಪಡೆದಂತೆ ಕನಸು ಕಾಣುವ ವ್ಯಕ್ತಿಗೆ ಇಷ್ಟಾರ್ಥ ಸಿದ್ಧಿಯಾಗುವುದು ಕೇವಲ ಅದನ್ನು ಕನಸಿನಲ್ಲಿ ಕಂಡರೆ ಶಾಂತಿ ಮತ್ತು ತೃಪ್ತಿ ಲಭಿಸುವುದು. ತನ್ನಲ್ಲಿರುವುದನ್ನು ಕಳೆದುಕೊಂಡಂತೆ ಕನಸು ಬಿದ್ದಲ್ಲಿ ಇಚ್ಛೆಗೆ ವಿರುದ್ಧವಾದ ಘಟನೆಗಳು ಜರಗುವುದು. ವ್ಯಾಪಾರ ವ್ಯವಹಾರದಲ್ಲಿ ನಷ್ಟ. ಪ್ರೇಮ ಜೀವನದಲ್ಲಿ ವಿರಸವುಂಟಾಗುವುದು. ಇನ್ನೊಬ್ಬ ಶಾಸ್ತ್ರಜ್ಞ ಅಮೆಥಿಸ್ಟ್ ರತ್ನ ನೋಡಿದಲ್ಲಿ ಸುಖಮಯ ವಿವಾಹ ಜೀವನ ಪ್ರಾಪ್ತಿಯೆಂದಿದ್ದಾನೆ.

### 2. ವಜ್ರಗಳು (Diamond)

ಯಾವ ಸ್ತ್ರೀಯು ಕನಸಿನಲ್ಲಿ ಇನ್ನೊಬ್ಬರಿಂದ ವಜ್ರವನ್ನು ಪಡೆದಂತೆ ಕಾಣುತ್ತಾಳೋ ಅಂತಹವಳಿಗೆ ಉನ್ನತ ಸ್ಥಾನ, ಸಂಪತ್ತುಗಳನ್ನು ಹೊಂದಿರುವ ವ್ಯಕ್ತಿಯೊಂದಿಗೆ ವಿವಾಹವಾಗುವುದು. ಅದೇ ಪುರಷನು ಕನಸಿನಲ್ಲಿ ತನ್ನ ಪ್ರೇಯಸಿಗೆ ವಜ್ರವನ್ನು ಕೊಡುತ್ತಿರುವಂತೆ ಕಂಡರೆ ಅಂತಹ ವ್ಯಕ್ತಿ ಸ್ತ್ರೀ ವಂಚನೆಯಿಂದ ದೂರವಿರಲು ಪ್ರಯತ್ನಿಸಬೇಕು.

ಅನ್ಯಗ್ರಂಥ ವಿವರಣೆ ಈ ರೀತಿ ಇದೆ. ವಜ್ರವನ್ನು ಕನಸಿನಲ್ಲಿ ಕಂಡಲ್ಲಿ ಅದೃಷ್ಟ ಪ್ರಾಪ್ತಿ. ಸ್ತ್ರೀಯು ಕಂಡಲ್ಲಿ ಅವಳಿಗೆ ಧನಿಕ ಹಾಗೂ ನಾಗರೀಕ ವ್ಯಕ್ತಿಯೊಡನೆ ವಿವಾಹವಿದೆ. ಅದೇ ಪುರುಷನ ಕನಸಿನಲ್ಲಿ ಕಂಡಾಗ, ದಯೆ, ಪ್ರೇಮ, ಬುದ್ಧಿಯನ್ನುಳ್ಳ ಸ್ತ್ರೀಯೊಡನೆ ವಿವಾಹವಾಗುವುದೇ ಅಲ್ಲದೇ ತನ್ನ ಉದ್ಯಮದಲ್ಲಿ ಅವಳ ಸಹಾಯದಿಂದ ಮುನ್ನಡೆಯುವನು. ವಜ್ರಗಳು ಸಿಕ್ಕಿದಂತೆ (ಆಕಸ್ಮಿಕ ಲಭ್ಯ) ಇಲ್ಲವೆ ಕಳೆದಂತೆ ಕನಸು ಬಿದ್ದಲ್ಲಿ, ಫಲಗಳಿಗೆ ವ್ಯತಿರಿಕ್ತವಾಗಿ ಮೇಲಿನ ಫಲಗಳುಂಟಾಗುವುದು. ಅಶುದ್ಧ ವಜ್ರವನ್ನು ಕನಸಿನಲ್ಲಿ ಕಂಡಲ್ಲಿ ನಿಮ್ಮ ಸ್ನೇಹಿತರೊಬ್ಬರ ವಿಚಾರದಲ್ಲಿ ಭಾವತಿರೇಕದಿಂದ ತಪ್ಪು ನಿರ್ಧಾರ ಕೈಗೊಂಡು ಆತನಿಗೆ ಅನುಕೂಲವಾಗಿ ವರ್ತಿಸುವಿರಿ. ಆದರೆ ಆ ಸ್ನೇಹಿತ ನಂಬಿಕಸ್ಥನಲ್ಲ.

### 3. ಪಚ್ಚೆ (Emerald)

ನೀವು ಪಚ್ಚೆಯನ್ನು ಧರಿಸುವಂತೆ ಕನಸು ಕಂಡಲ್ಲಿ ನಿಮ್ಮ ವಿವಾಹ ಸುಸೂತ್ರವಾಗಿ ನಡೆಯುವುದು. ಅದು ನೀವು ಇಚ್ಛಿಸಿದವರೊಂದಿಗೆ ನಡೆದು ಸುಖಮಯ

ವಾಗಿದ್ದು ಐಹಿಕ ತೃಪ್ತಿಯುಂಟುಮಾಡುವುದು. ಪಚ್ಚೆಗಳ ಪ್ರದರ್ಶನ : ಅಥವ ಇನ್ನೊಬ್ಬರು ಅದನ್ನು ಧರಿಸಿರುವಂತೆ ಕನಸು ಬಿದ್ದರೆ ನಿಮ್ಮ ದಿನನಿತ್ಯ ವ್ಯವಹಾರದಲ್ಲಿ ಪ್ರಯಾಣ ಉಂಟಾಗಿ ಉತ್ತಮವಾದ ರೀತಿಯಲ್ಲಿ ಅನೇಕ ಬದಲಾವಣೆಗೆ ಒಳಪಡುವುದು. ಅಷ್ಟೇ ಅಲ್ಲದೆ ಸಂಸಾರ ಜೀವನ ಸುಖಮಯವಾಗಿರುತ್ತೆ. ಉದ್ಯಮದಲ್ಲಿ ಪ್ರಗತಿ ಕಾಣುವಿರಿ.

ಅನ್ಯಮತರೀತ್ಯ : ನಿಮ್ಮ ಪ್ರೇಮಿ ಪಚ್ಚೆಗಳ ಆಭರಣ ಧರಿಸಿದಂತೆ ನೀವು ಕನಸು ಕಂಡರೆ, ನಿಮ್ಮ ಪ್ರೇಮಜೀವನದಲ್ಲಿ ವಿರುದ್ಧಶಕ್ತಿಗಳು ಅಡ್ಡಿಯಾಗಿದ್ದು ನಿಮ್ಮ ಪ್ರೇಮಿ ಬೇರೊಬ್ಬರಲ್ಲಿ ಅನುರಕ್ತಳಾಗಿರುವಳು. ಆ ವ್ಯಕ್ತಿ ನಿಮಗಿಂತಲೂ ಧನಿಕ.

### 4. ಜೇಡ್ (Jade)

ಜೇಡ್ ಆಭರಣ ಅಥವ ರತ್ನವನ್ನು ಕನಸಿನಲ್ಲಿ ಕಂಡಲ್ಲಿ ನಿಮ್ಮ ಜನಾಂಗದಲ್ಲಿ ಪ್ರತಿಷ್ಠಿತ ವ್ಯಕ್ತಿಯಾಗುವಿರಿ. ನೀವು ಜೇಡ್‌ನ ರತ್ನ ಅಥವ ಆಭರಣವನ್ನು ಗುಪ್ತವಾಗಿ ಒಂದು ಡಬ್ಬಿಯಲ್ಲಿ ಬಚ್ಚಿಡುವಂತೆ ಕನಸು ಕಂಡಲ್ಲಿ ನಿಮ್ಮ ವ್ಯವಹಾರದಲ್ಲಿ ವಿಶೇಷವಾಗಿ ಲಾಭ ಗಳಿಸುವಿರಿ.

### 5. ಜಾಸ್ಪರ್ (Jasper)

ಜಾಸ್ಪರನ್ನು ನೀವು ಕನಸಿನಲ್ಲಿ ಕಂಡರೆ ನೀವು ಪ್ರೇಮ-ಪ್ರೀತಿ ವ್ಯವಹಾರಗಳಲ್ಲಿ ಜಯಗಳಿಸುವಿರಿ. ಆದರೆ ನೀವು ಅದನ್ನು ಕಳೆದುಕೊಂಡಂತೆ ಕನಸು ಬಿದ್ದರೆ ನೀವು ನಿಮ್ಮ ಪ್ರೇಮಿಯೊಂದಿಗೆ ಜಗಳವಾಡುವುದು ಖಚಿತವಾದ್ದರಿಂದ ಎಚ್ಚರಿಕೆ ಅಗತ್ಯ.

### 6. ಓಪಾಲ್ (Opal)

ನೀವು ಕನಸಿನಲ್ಲಿ ಓಪಾಲ್ ರತ್ನವನ್ನು ನೋಡಿದರೆ ಅಥವ ಧರಿಸಿದಂತೆ ಕಂಡರೆ ನಿಮಗೆ ನಿಸ್ಪೃಹರಾದ ನಿಷ್ಠಾವಂತ ಸ್ನೇಹಿತರು ನಿಮ್ಮ ತಪ್ಪುಗಳೇನೇ ಇದ್ದರೂ ನಿಮ್ಮ ಪರವಾಗಿ ನಿಲ್ಲುವರು. ನೀವು ಅದನ್ನು ಕೊಳ್ಳುತ್ತಿದ್ದಂತೆ ಕನಸು ಕಂಡರೆ ನೀವು ಇಚ್ಚಿಸಿದವರೊಂದಿಗೆ ಪ್ರೀತಿ, ಪ್ರೇಮ, ವಿಶ್ವಾಸ ಗಳಿಸಿಕೊಳ್ಳುವಿರಿ.

### 7. ಮುತ್ತುಗಳು (Pearls)

ಯಾವುದೇ ಸ್ತ್ರೀ ಮುತ್ತುಗಳ ಉಡುಗೊರೆ ಪಡೆದಲ್ಲಿ ಸುಖಮಯ ವಿವಾಹ ಜೀವನ ಲಭಿಸುವುದು. ಮುತ್ತುಗಳನ್ನು ಕಳೆದುಕೊಂಡಂತೆ ನೋಡಿದಲ್ಲಿ ವ್ಯವಹಾರ

ನಷ್ಟ, ವಿಶ್ವಾಸಕ್ಕೆ ಧಕ್ಕೆಯಾಗುವುದು. ಮುತ್ತುಗಳನ್ನು ಪೋರತ್ತೆಗೆಯುವುದನ್ನು ಕಂಡಲ್ಲಿ ಹೊಸ ಅವಕಾಶಗಳು ನಿಮ್ಮ ಉನ್ನತಿಗೆ ಕಾದಿವೆ. (ಇದು ಒಬ್ಬ ಸ್ವಪ್ನ ಫಲ ಶಾಸ್ತ್ರಜ್ಞನ ದೃಷ್ಟಿ).

ಮುತ್ತುಗಳನ್ನು ಇನ್ನೊಬ್ಬರಿಂದ ಪಡೆದಂತೆ ಕಂಡರೆ ಆ ಸ್ತ್ರೀಗೆ ವಿವಾಹ ಸೌಖ್ಯ ಲಭಿಸುವುದು. ತನ್ನಲ್ಲಿದ್ದ ಮುತ್ತುಗಳನ್ನು ಕಳೆದುಕೊಂಡಂತೆ ಕನಸು ಕಂಡಲ್ಲಿ ವ್ಯವಹಾರ, ವ್ಯಾಪಾರಗಳಲ್ಲಿ ಹದಗೆಟ್ಟ ಸ್ಥಿತಿಯುಂಟಾಗುವುದು. ಮುತ್ತುಗಳನ್ನು ನೀವು ಸಂಗ್ರಹಿಸುವಂತೆ ಕನಸು ಬಿದ್ದಲ್ಲಿ ನಿಮ್ಮ ಮುನ್ನಡೆಗೆ ಹೊಸ ಅವಕಾಶಗಳು ಲಭಿಸಿ ಶುಭ ಪ್ರಾಪ್ತಿಯಾಗುವುದು.

**ಅನ್ಯಮತರೀತ್ಯ :** ಮುತ್ತುಗಳನ್ನು ಕಳೆದುಕೊಳ್ಳುವಂತೆ ಕನಸು ಕಂಡಲ್ಲಿ ಪ್ರೇಮ, ವ್ಯಾಪಾರ ಎರಡರಲ್ಲೂ ನಷ್ಟ ಸೂಚಕ. ನೀವು ಯಾರಿಗಾದರೂ ಮುತ್ತುಗಳನ್ನು ಉಡುಗೊರೆಯಾಗಿ ಕೊಟ್ಟಂತೆ ಕನಸು ಕಂಡಲ್ಲಿ ನಿಮ್ಮ ಪ್ರಿಯತಮ ಅಥವ ಪತ್ನಿಯ ಧಾಂಬಿಕ ವರ್ತನೆಯ ಬಗ್ಗೆ ಎಚ್ಚರ ಅಗತ್ಯ. ನೀವು ಬೇರೆಯವರಿಂದ ಮುತ್ತುಗಳ ಉಡುಗೊರೆ ಪಡೆದರೆ ನಿಮ್ಮನ್ನು ಪ್ರೀತಿಸುವ, ನಿಮ್ಮನ್ನೇ ಆರಾಧಿಸುವ ಉತ್ತಮ ಗುಣದ ಜೀವನ ಸಂಗಾತಿ ದೊರಕುವಳು.

## 8. ಪುಷ್ಪರಾಗ (Topaz)

ಕನಸಿನಲ್ಲಿ ಪುಷ್ಪರಾಗ ಕಂಡರೆ ನಿಮ್ಮ ಪ್ರೇಮಿ ನಿಮ್ಮಲ್ಲಿ ಸದಾ ಅನುರಕ್ತಳಿರುವರು ಹಾಗೂ ನಿಮ್ಮ ಸುಖವನ್ನು ಬಯಸುವಳು. ಪುಷ್ಪರಾಗವನ್ನು ಇನ್ನೊಬ್ಬರಿಂದ ಪಡೆದಂತೆ ಕನಸು ಕಂಡಲ್ಲಿ ಶುಭಫಲ. ಸುಖಮಯ ದಾಂಪತ್ಯ ಜೀವನ. ಪುಷ್ಪರಾಗದ ಉಂಗುರ ನಿಮಗೆ ಬಳುವಳಿಯಾಗಿ ಕೊಟ್ಟಂತೆ ಕನಸು ಕಂಡರೆ ನಿಮ್ಮ ಪ್ರೇಮಿ ನಿಮಗಿಂತಲೂ ಹೆಚ್ಚು ಪ್ರೀತಿಯನ್ನು ನಿಮ್ಮಲ್ಲಿಟ್ಟಿರುವಳು.

## 9. ಫಿರೋಜ್ (Turquoise)

ಇದನ್ನು ಕಂಡಂತೆ ಅಥವ ನೀವೆ ಧರಿಸಿದಂತೆ ಕನಸು ಕಂಡಲ್ಲಿ, ನಿಮಗೆ ಅತ್ಯಂತ ರೋಮಾಂಚಕಾರಿ ಸನ್ನಿವೇಶಗಳುಂಟಾಗಿ ಪ್ರವಾಸ ಸುಖ. ಎಂದಿಗೂ ಮರೆಯಲಾಗದಂತಹ ವಿಚಿತ್ರ ಘಟನೆಗಳನ್ನು ನೈಜ ಜೀವನದಲ್ಲಿ ಕಾಣುವಿರಿ. ಅವುಗಳಲ್ಲಿ ಕೆಲವು ವಿಹಿತ ಕೆಲವು ಹಿತವಾದ ಘಟನೆಗಳೂ ಇರುವುವು. ಇದನ್ನು ಕಳೆದುಕೊಂಡಂತೆ ಕನಸು ಕಂಡಲ್ಲಿ ದುರಾದೃಷ್ಟ ಸನ್ನಿಹಿತವಾಗಿದೆ ಎಂದು ಭಾವಿಸಬೇಕು. ಇನ್ನೊಬ್ಬ ಲೇಖಕರ ಪ್ರಕಾರ ಈ ಫಿರೋಜ್‌ನ ಉಂಗುರ ನೀವು ಕಳೆದುಕೊಂಡಂತೆ ಕನಸು ಬಿದ್ದಲ್ಲಿ ನಿಮಗೆ ದುಃಖಮಯ ಸನ್ನಿವೇಶ ಉಂಟಾಗುವುದೇ ಅಲ್ಲದೆ ನಿಮ್ಮ ಪ್ರೇಮಿ (ಪತ್ನಿ)ಗೆ ನಾನಾ ರೀತಿಯ ಅಡ್ಡಿ ಆತಂಕಗಳು ಉಂಟಾಗುವುವು.

## 10. ಮಾಣಿಕ್ಯ (Ruby)

ಮಾಣಿಕ್ಯವನ್ನು ಕಳೆದುಕೊಂಡಂತೆ ಬೀಳುವ ಕನಸು ಪ್ರೇಮ ಜೀವನದಲ್ಲಿ ಅತೃಪ್ತಿ, ನಿರಾಶೆ ಸೂಚಕ. ಮಾಣಿಕ್ಯ ದೊರಕಿದಂತೆ ಕನಸುಕಾಣುವುದು ಶುಭ. ವಿವಾಹವಾಗದಿರುವವರಿಗೆ ವಿವಾಹ ಸನ್ನಿಹಿತ. ಮತ್ತೊಬ್ಬ ಶಾಸ್ತ್ರಜ್ಞನ ಪ್ರಕಾರ ಕನಸಿನಲ್ಲಿ ಮಾಣಿಕ್ಯ ನೀವೆ ಧರಿಸಿದಂತೆ ಕಂಡರೆ ಶ್ರೀಮಂತರಾಗುವಿರಿ, ಸುಖ, ಭೋಗ, ಉಲ್ಲಾಸ ಹಾಗೂ ಸಂತೋಷವುಂಟಾಗುವ ಯಾತ್ರೆಗಳನ್ನು ಕೈಗೊಳ್ಳುವಿರಿ.

## 11. ಇಂದ್ರನೀಲ (Saphire)

ಕನಸಿನಲ್ಲಿ ಇಂದ್ರನೀಲ ಅಥವ ಮಹಾನೀಲವನ್ನು ನೋಡಿದಲ್ಲಿ ನಿಮಗೆ ಅದೃಷ್ಟ ಸೂಚಕ. ನೀವು ಆಲೋಚಿಸದೆ ಇರುವಂತಹ ಅತ್ಯಂತ ಮಹದಾಶ್ಚರ್ಯ ಶುಭ ಘಟನೆ ನಿಮ್ಮ ಜೀವನದಲ್ಲಿ ಉಂಟಾಗಲಿದೆ. ಯಾವುದೇ ಸ್ತ್ರೀ ಈ ರತ್ನದ ಕನಸು ಕಂಡಲ್ಲಿ ತನ್ನ ಪತಿಯೊಂದಿಗೆ ಅತ್ಯಂತ ಪ್ರೀತಿಪಾತ್ರಳಾಗುವಳು. ವಿವಾಹವಿಲ್ಲದ ಕನ್ಯೆಯಾದರೆ ವಿವಾಹ ಸನ್ನಿಹಿತ. ಯಾವ ಪುರುಷನು ಈ ನೀಲಮಣಿಯನ್ನು ಕನಸಿನಲ್ಲಿ ಕಂಡರೆ ಅವನ ಜೀವನ, ಉದ್ಯೋಗಗಳೆರಡರಲ್ಲೂ ಉನ್ನತಿ ಕಾಣುವುದು ಖಚಿತವೆಂದಿದ್ದಾರೆ ಸ್ವಪ್ನಶಾಸ್ತ್ರ ಪರಿಣಿತರು.

### ಇತರ ಯಾವುದೇ ವಿಧ ರತ್ನಗಳು

ಬೇರೆ ಯಾವುದೇ ರತ್ನ ಕನಸಿನಲ್ಲಿ ಕಂಡರೆ ಅಥವ ಅದನ್ನು ಪಡೆದರೆ ವ್ಯಾಪಾರ ಅಭಿವೃದ್ಧಿ, ಸುಖ, ಸೌಖ್ಯ, ಶಾಂತಿ ಹಾಗೂ ಸಂಸಾರ (ದಾಂಪತ್ಯ) ಜೀವನದಲ್ಲಿ ಪ್ರಗತಿಯನ್ನು ಸೂಚಿಸುವುದು. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ವಿಷಯ ಏನೆಂದರೆ ಆ ರೀತಿಯ ರತ್ನಗಳು ಪರಿಶುದ್ಧವಾದವುಗಳು, ಸೀಳು ಬಿಡದವುಗಳು, ಉತ್ತಮ ಆಕಾರಗಳನ್ನುಳ್ಳವು ಆಗಿರುವುದು ಅವಶ್ಯಕವೆಂದಿರುವರು. ಅವುಗಳು ದೋಷಯುಕ್ತವಾಗಿರುವಂತೆ ಕಾಣಿಸಿಕೊಂಡಲ್ಲಿ ನಿಮ್ಮ ಆಲೋಚನೆಗಳೆಲ್ಲ ನೀರು ಪಾಲಾಗಿ ದುರಾದೃಷ್ಟ ಸೂಚನೆ ಕೊಟ್ಟೀತು ಎಂದಿದ್ದಾರೆ. ಕೃತಕ ರತ್ನಗಳನ್ನು ಕನಸಿನಲ್ಲಿ ಕಾಣುವುದು ಶುಭವಲ್ಲ.

# ಮುತ್ತಿನ ಮಹತ್ವ – 9

ಹಿಂದಿನ ಲೇಖನಗಳಲ್ಲಿ ಮುತ್ತಿನಲ್ಲಿರುವ ರಾಸಾಯನಿಕ ಸಂಯೋಜನೆ, ರೋಗ ನಿವಾರಕ ಶಕ್ತಿ, ಯಾವ ವ್ಯಕ್ತಿಗೆ ಶುಭಫಲವೀಯುವುದು ಎಂಬುದನ್ನು ತಿಳಿಸಿದ್ದೇವೆ. ಕುಂಭ ರಾಶಿಯವರನ್ನುಳಿದು ಇತರ ಎಲ್ಲಾ ರಾಶಿಯವರಿಗೂ ಮುತ್ತು ಶುಭಪ್ರದ

ವೆಂದು ಹೇಳಿದ್ದೇವೆ. ಇಂದು ಸಿರಿವಂತರ ಸ್ವತ್ತೇ ಅಲ್ಲದೆ ಸಾಮಾನ್ಯರಿಗೂ ಲಭ್ಯವಿರುವ ಈ ಮುತ್ತಿನ ಮಹತ್ವವೇನೆಂದು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದೇವೆ.

**ರಸತರಂಗಿಣಿ ಗ್ರಂಥಕಾರ ಮುತ್ತಿನ ಬಗ್ಗೆ**

ಮೌಕ್ತಿಕಂ ವೃಷ್ಯಮಾಯುಷ್ಯಂ ಮಧುರಂ ಶಶಿರಂ ಪರಂ
ದೀಪನಂ ದಾಹ ಪ್ರಶಮನಂ ನೇತ್ರಂ ವರ್ಣ್ಯಪ ಕೀರ್ತಿತಂ
ಜೀರ್ಣಜ್ವರ ಪ್ರಶಮನಂ ತ್ವಸ್ಥಿದಂತ ನಿವರ್ಧನಂ
ಹೃದ್ಯಂ ಮೇದಹರಂ ಮೇಧ್ಯಂ ದಂತೋದ್ಭೇದ ಜ್ವರಾಪಹಂ

ಎಂದರೆ ಮುತ್ತು ವೀರ್ಯವರ್ಧಕ, ದೀರ್ಘಾಯುರ್ದಾಯಕ, ದಾಹಶಾಮಕ ಆದರೂ ಅಗ್ನಿದೀಪಕ, ನೇತ್ರ ಹಿತವುಂಟುಮಾಡುವುದು, ಶರೀರ ಕಾಂತಿವರ್ಧಕ, ಅಸ್ತಿಜ್ವರನಾಶಕ, ಮೂಳೆ – ದಂತಗಳಿಗೆ ಬಲವುಂಟುಮಾಡುವುದು, ಹೃದಯಕ್ಕೆ ಶಕ್ತಿದಾಯಕ, ಬುದ್ಧಿಬಲವರ್ಧಕ, ಮಕ್ಕಳಿಗೆ ಹಲ್ಲು ಹುಟ್ಟುವಾಗ ಬರುವ ಬೇನೆಗಳನ್ನು ಪರಿಹರಿಸುವುದು ಎಂದಿದ್ದಾನೆ.

ಇಂದು ಪಾಶ್ಚಾತ್ಯ ದೇಶಗಳಲ್ಲಿ ಮುತ್ತಿನ ಉಪಯೋಗ ಬಹಳವಾಗಿದೆ, ಅಮೇರಿಕೆಯಲ್ಲಿ ಮುತ್ತಿನ ಮಾತ್ರೆಗಳನ್ನು ಸೌಂದರ್ಯ ವೃದ್ಧಿಗೂ, ವಾತವಾಹಿನಿ ನರಗಳ ಶಾಮಕವೆಂದು ಪರಿಗಣಿಸಿ ಸಕ್ಕರೆ ಕವಚದೊಡನೆ ಸೇವಿಸುವರು.

ಜಪಾನ್ ದೇಶದಲ್ಲಿ ವಿಪುಲವಾಗಿ ಲಭ್ಯವಿರುವ ಮುತ್ತುಗಳನ್ನು ಚೂರ್ಣಮಾಡಿ ಚೈನಾ ದೇಶಕ್ಕೆ ಕಳುಹಿಸಿಕೊಡುತ್ತಾರೆ. ಇದನ್ನು ಚೈನಾದ ಸ್ತ್ರೀಯರು ವಿವಿಧ ರೂಪದಲ್ಲಿ ಬಳಸುತ್ತಾರೆ. ಇದಕ್ಕೆ ಕಾರಣ ಮುತ್ತಿನ ಚೂರ್ಣದಲ್ಲಿ ಬೆಳ್ಳುಳ್ಳಿ ಹಾರ್ಮೋನ್‌ಗಳು, ಅನ್ನಾಂಗಗಳು, ಕ್ಲೋರೋಫಿಲ್ ಇತ್ಯಾದಿಗಳನ್ನು ಸೇರಿಸಿದ ಪೌಷ್ಟಿಕಗಳು ಉತ್ಸಾಹವನ್ನುಂಟುಮಾಡುವುದೆಂಬ ನಂಬಿಕೆಯಿದೆ.

ಹೆಂಗಸರ ಋತು ನಿಲ್ಲುವ ವಯಸ್ಸಿನಲ್ಲಿ ಉಂಟಾಗುವ ತೊಂದರೆಗಳನ್ನು ಈ ಮುತ್ತಿನ ಚೂರ್ಣ ನಿವಾರಿಸಬಲ್ಲದಾಗಿದೆ.

ಮುತ್ತಿನಲ್ಲಿ ಕ್ಷಯರೋಗ ನಿರೋಧಿಸುವ ಶಕ್ತಿಯಿದೆ. ಚೀನಾ ವೈದ್ಯರ ಅಭಿಪ್ರಾಯದ ಮೇಲೆ ಆಧುನಿಕ ವೈದ್ಯರು ಸಂಶೋಧನೆಗಳನ್ನು ನಡೆಸಿದರ ಫಲವಾಗಿ ಸ್ತ್ರೀಯರ ಆರೋಗ್ಯ ಸೌಂದರ್ಯ ವೃದ್ಧಿಗೆ ಮುತ್ತುಗಳು ಉಪಯುಕ್ತವೆಂದು ಕಂಡುಬಂದಿದೆ.

ನಮ್ಮ ಪುರಾಣಗಳಲ್ಲಿ ನೀಲಿ ವರ್ಣದ ಮುತ್ತುಗಳು ಆರೋಗ್ಯ ವರ್ಧಕ ಹಾಗೂ ಮನಸ್ಥೈರ್ಯಕ್ಕೆ ಸಹಾಯಕವೆಂದು ಹೇಳಲಾಗಿದೆ.

ಚೀನಾದ ಗ್ರಂಥಗಳಲ್ಲೂ ಮುತ್ತು ಹೃದಯಶಾಮಕ, ಬಲಕರ, ವಿಷನಾಶಕ ಹಾಗೂ ನರಗಳಿಗೆ ಶಾಮಕವೆಂದು ತಿಳಿಸಿದ್ದಾರೆ.

ಮುಪ್ಪನ್ನು ದೂರವಿಡಲು, ಚರ್ಮ ಸುಕ್ಕುಬೀಳುವುದನ್ನು ತಡೆಗಟ್ಟಲು ಚೀನಾ ಸ್ತ್ರೀಯರು ಈ ಮುತ್ತಿನ ಚೂರ್ಣವನ್ನು ಬಳಸುವರು.

ಆಯುರ್ವೇದ ಗ್ರಂಥಗಳ ರೀತ್ಯ ಮೌಕ್ತಿಕ ಭಸ್ಮ (ಮುತ್ತುಗಳಿಂದ ತಯಾರಾದ ಭಸ್ಮ) ತಂಪು, ನೇತ್ರಗಳಿಗೆ ಲಾಭದಾಯಕ, ಶಕ್ತಿವರ್ಧಕ, ಶರೀರ ತೇಜೋವೃದ್ಧಿ ಕರ, ಆಯುವೃದ್ಧಿ ಕರ, ಕ್ಷಯ ನಿವಾರಕ, ವಿಷಮಜ್ವರ ನಿವಾರಕ, ಕೆಮ್ಮು-ದಮ್ಮು-ಶ್ವಾಸ, ಹೃದಯಬಡಿತ, ಅಜೀರ್ಣಕ್ಕೆ ಹಾಗೂ ಅಂಗೈ ಉರಿ ಶಾಮಕವೆಂದು ತಿಳಿಸಿದ್ದಾರೆ.

ಇದು ತ್ರಿದೋಷಘ್ನವಾಗಿದೆ. ಗುಣದಿಂದ ಕಫವನ್ನು, ರಸವಿಪಾಕವನ್ನು, ವಾತವನ್ನು ಹಾಗೂ ವೀರ್ಯದಿಂದ ಪಿತ್ತವನ್ನು ಶಾಂತಗೊಳಿಸುತ್ತದೆ. ಇದು ಮೇಧ್ಯ ಹಾಗೂ ನಾಡಿಬಲ್ಯವಾಗಿದೆ. ದೀಪನ, ಯಕೃತ್‌ಬಲ್ಯ ಹಾಗೂ ಗ್ರಾಹಿಯಾಗಿದೆ. ಹೃದಯ ಹಾಗೂ ಶೋಣಿತ ಸ್ಥಾಪಿತವಾಗಿದ್ದು ಶೋಧಕರವಾಗಿದೆ. ಕಫಸಾರಕ, ವೃಷ್ಯ, ಮೂತ್ರಲವಾಗಿದೆ. ಮತ್ತು ಸ್ವೇದಾಪನಯ, ಜರಘ್ನ ಹಾಗೂ ದಾಹಪ್ರಶಮನವಾಗಿದೆ. ಜೀವನೀಯ ಹಾಗೂ ಸಂಧಾನೀಯವಾಗಿದ್ದು ವಿಷಘ್ನವಾಗಿದೆ, ಚಕುಷ್ಯವಾಗಿದೆ.

ಮೌಕ್ತಿಕವು ಬೃಂಹಣೀಯ, ದಾಹಶಾಮಕ, ಅಸ್ಥಿಗಳಿಗೆ ಬಲವನ್ನು ಕೊಡುವಂತಹುದು. ಜ್ವರಘ್ನ, ಉಷ್ಣಹಾರಕ, ಪಿತ್ತಶಾಮಕ, ನೇತ್ರ್ಯ, ಹೃದ್ಯ, ಸ್ವರ್ಯ್ಯ, ಸ್ಮೃತಿಪ್ರದ, ಮೇಹ, ಮೇಹಾಸ್ರ ರಕ್ತ, ಪಿತ್ತ, ಕಾಸ, ಕಫ, ಶ್ವಾಸ ರೋಗಾದಿಗಳನ್ನು ಪರಿಹರಿಸುತ್ತದೆ. ಭ್ರಾಂತಿ, ತಲೆ ತಿರುಗುವಿಕೆ, ಆಯಾಸ, ಬಳಲಿಕೆಗಳನ್ನು ದೂರಮಾಡುತ್ತದೆ. ಪಿತ್ತ ಪ್ರಧಾನ ವಿಕಾರಗಳಲ್ಲಿ ಹಿತಕಾರಿಯಾಗಿದೆ.

**ಪ್ರಮಾಣ** —1 ರಿಂದ 2 ಗುಂಜ.

**ಅನುಪಾನ** —ಹಾಲು, ತುಪ್ಪ, ಸಕ್ಕರೆ, ಬೆಣ್ಣೆ, ಜೇನು, ಬ್ರಾಹ್ಮೀ ಅವಲೇಹ್ಯ, ಕೂಷ್ಮಾಂಡಾವ ಲೇಹ್ಯ, ದಾಡಿ ಮಾವ ಲೇಹ್ಯಾದಿಗಳು.

**ವಿಶಿಷ್ಟಯೋಗ**—ಮುಕ್ತಾಪಂಚಾಮೃತ, ಮುಕ್ತಾದ್ಯ ಚೂರ್ಣ, ವಸಂತ ಕುಸುಮಾಕರ ಇತ್ಯಾದಿ.

**ಮುತ್ತು ಹವಳಗಳ ಶುದ್ಧೀಕರಣ**

ಆಯುರ್ವೇದಾಚಾರ್ಯರು ಮತ್ತು ಸಿದ್ಧವೈದ್ಯ ಪರಿಣಿತರು ಮುತ್ತು ಹವಳಗಳನ್ನು ಶುದ್ಧಿಮಾಡಿದ ನಂತರವೇ ಔಷಧಿ ತಯಾರಿಕೆಯಲ್ಲಿ ಉಪಯೋಗಿಸುವರು. ಶುದ್ಧಿಮಾಡದೆ ಹಾಗೆಯೇ ತಯಾರಿಸಿದ ಔಷಧಿಗಳು ವಿಪರ್ತಿಯಾಗಿ ನಾನಾ ತೊಂದರೆಗಳುಂಟುಮಾಡಬಹುದು.

**1. ಮುತ್ತಿನ ಶುದ್ಧಿ ಕ್ರಮ :** ಹುಣಸೇ ಹಣ್ಣಿನಲ್ಲಿ 3 ಯಾಮ ಚೆನ್ನಾಗಿ ನೆನೆಯಿಟ್ಟರೆ ಶುದ್ಧಿಯಾಗುತ್ತೆ. ನಂತರ ಔಷಧಿ ತಯಾರಿಕೆಗೆ ಸಿದ್ಧ.

**2. ಹವಳದ ಶುದ್ಧಿ ಕ್ರಮ :** (ಎ) ಮಜ್ಜಿಗೆಯಲ್ಲಿ ಹಾಕಿ ಬೇಯಿಸಿದರೆ ಶುದ್ಧಿಯಾಗುತ್ತೆ. ಅಥವ (ಬಿ) 3 ದಿನ ನಿಂಬೆ ಹುಳಿಯಲ್ಲಿ ಹಾಕಿ ಬಿಸಿಲಿಗಿಟ್ಟು ನಂತರ ಕಿರುಗುಳ್ಳದ ರಸದಲ್ಲಿ 3 ದಿನಗಳ ಕಾಲ ನೆನೆಸಿಟ್ಟು ನಂತರ ಚೆನ್ನಾಗಿ ತೊಳೆದು ಉಪಯೋಗಿಸಬಹುದು.

## ರತ್ನಗಳಲ್ಲೂ ನಾನಾ ವಿಧ – 10

ರತ್ನಗಳಲ್ಲೂ ಹಲವು ವಿಧ. ಅವುಗಳಲ್ಲಿ ನಾಲ್ಕು ವಿಧ. ಮುಖ್ಯವಾಗಿ ಮಾರುಕಟ್ಟೆಯಲ್ಲಿ ದೊರಕುತ್ತವೆ. ಅವು—

1. ನಿರ್ದಿಷ್ಟ ಆಕಾರ, ಪ್ರಕಾಶ, ಶುದ್ಧವುಳ್ಳ ನೈಜ ರತ್ನಗಳು.
2. ಅಪ್ರಕಾಶಿತ ಆಕಾರವಿಲ್ಲದ ರತ್ನಗಳು
3. ಅಶುದ್ಧ-ಆಕಾರವಿಲ್ಲದ ರತ್ನಗಳು
4. ಕೃತಕ ರತ್ನಗಳು.

**1. ನಿರ್ದಿಷ್ಟ ಆಕಾರ-ಪ್ರಕಾರ-ಶುದ್ಧವುಳ್ಳ ನೈಜ ರತ್ನಗಳು**

ಪಾರದರ್ಶಕ, ಶುದ್ಧ, ಪ್ರಕಾಶಮಾನವಾದ, ಸರಿಯಾದ ಆಕಾರಗಳಲ್ಲಿ ತರಲ್ಪಟ್ಟ ಮೊದಲ ವರ್ಗದ ನೈಜ ರತ್ನಗಳಿಗೆ ಬೆಲೆ ಹೆಚ್ಚು. ಇವುಗಳನ್ನು ಆಭರಣಗಳಿಗೆ, ಕಿರೀಟಗಳಲ್ಲಿ ಹಾಗೂ ದೇವರ ವಿಗ್ರಹಗಳ ಅಲಂಕಾರಕ್ಕೆ ಬಳಸುವರು. ಅವುಗಳನ್ನು ನವಗ್ರಹಗಳಿಂದುಂಟಾಗುವ ದೋಷನಿವಾರಣಾ ಕಾಲದಲ್ಲೂ ಉಪಯೋಗಿಸಲ್ಪಡುವುದು.

**2. ಅಪ್ರಕಾಶಿತ-ಆಕಾರವಿಲ್ಲದ ರತ್ನಗಳು**

ಇವು ನೈಜ ರತ್ನಗಳೇ ಆದರೂ ಎರಡನೇ ವರ್ಗದವೆಂದು ಹೇಳಬಹುದು. ಇವುಗಳ ಪ್ರಕಾಶ ಕಡಿಮೆ. ಶುದ್ಧತೆಯೂ ಇರಲಾರದು. ಇವುಗಳನ್ನು ಸ್ಪಷ್ಟವಾದ

ಆಕಾರಗಳಲ್ಲಿ ಮಾರುವುದಿಲ್ಲ. ಕೈಗಾರಿಕೆಯಲ್ಲಿ ಇದು ಪ್ರಕಾಶಗೊಳಿಸುವುದು ಕಷ್ಟ. ಇವು ಆಭರಣಗಳಲ್ಲಿ ಹೊಳೆಯಲಾರವು. ಆದ್ದರಿಂದ ಆಯುರ್ವೇದ ಪಂಡಿತರಿಂದ ಔಷಧಿಗಳ ತಯಾರಿಕೆಗೆ ಹೇರಳವಾಗಿ ಬಳಸಲ್ಪಡುತ್ತದೆ. ಇವು ಧಾರಣೆಯಲ್ಲಿ ಸುಲಭ ಆದಾಗ್ಯೂ ರತ್ನ ಚಿಕಿತ್ಸಾ ತಂತ್ರದಲ್ಲಿ ಬಹು ಉಪಯುಕ್ತ.

## 3. ಆಕಾರವಿಲ್ಲದ ಅಶುದ್ಧ ರತ್ನಗಳು

ಈ ರತ್ನಗಳು ಗಣಿಯಲ್ಲಿ ದೊರಕಿದರೂ ಸ್ಪಷ್ಟವಾದ ಆಕಾರಕ್ಕೆ ತರಲು ಸಾಧ್ಯವಾಗದು. ಇದು ಪಾರದರ್ಶಕ ಗುಣವನ್ನಾಗಲಿ, ಅತಿಯಾದ ಪ್ರಕಾಶವನ್ನಾಗಿ ಹೊಂದಿರುವುದಿಲ್ಲ. ಮಲಿನತೆಯನ್ನುಳ್ಳ ಈ ರತ್ನಗಳನ್ನು ಭಸ್ಮಾದಿಗಳನ್ನು ತಯಾರಿಸಲು ಬಳಸುವರು. ರತ್ನಗಳಿಂದ ಚಿಕಿತ್ಸೆ ಮಾಡುವ ವಿಧಾನಕ್ಕೆ (Cosmic Therapy) ಯೋಗ್ಯವಾಗದು. ಆಯುರ್ವೇದದಲ್ಲಿ ಇನ್ನು ಕೆಲವು ರೀತಿಯ ಔಷಧಿ ತಯಾರಿಕೆಗೆ ಬಳಸುವರು.

## 4. ಕೃತಕ ರತ್ನಗಳು

ರತ್ನಗಳಂತೆಯೇ ಆಕಾರವನ್ನು ಕೊಟ್ಟು ರಾಸಾಯನಿಕ ವಸ್ತುಗಳನ್ನು ಗಾಜು ಮುಂತಾದವುಗಳೊಂದಿಗೆ ಸೇರಿಸಿ ಪಾರದರ್ಶಕವಾಗಿರುವಂತೆ ಇಂದು ಹೆಚ್ಚಾಗಿ ತಯಾರಿಸಿ ಅನೇಕರಿಗೆ ಮೋಸ ಮಾಡುತ್ತಿರುವರು. ಇದರ ಬಗ್ಗೆ ಎಚ್ಚರಿಕೆ ಅಗತ್ಯ. ಇವುಗಳು ನೈಜ ರತ್ನಗಳಂತೆ ಹೊರನೋಟಕ್ಕೆ ಕಾಣಿಸಿದರೂ ಗ್ರಹಗಳ ದೋಷ ಪರಿಹಾರಕ್ಕಾಗಲಿ, ಔಷಧಿ ತಯಾರಿಕೆಗಾಗಲಿ, ಪ್ರಯೋಜನವಾಗದು. ತೂಕ, ಸಾಪೇಕ್ಷ ಸಾಂದ್ರತೆ, ಘಡಸು ಇತ್ಯಾದಿಗಳಲ್ಲಿ ರತ್ನಗಳಿಗಿಂತಲೂ ವಿಭಿನ್ನವಾಗಿದ್ದು ಬೆಲೆಯಲ್ಲಿ ಅತಿ ಸುಲಭವಾಗಿ ದೊರಕುವುದು.

### ಕೃತಕ ರತ್ನ ತಯಾರಿಸುವ ಕ್ರಮ ಹೇಗೆಂದು ಇಲ್ಲಿ ತಿಳಿಸಲಾಗಿದೆ

ಕೃತಕ ವಜ್ರ (ರತ್ನಗಳನ್ನು) ಕೈಗಾರಿಕೆಗಳಲ್ಲಿ ನಾನಾ ರೀತಿಯಲ್ಲಿ ತಯಾರಿಸುವರು. ಅವುಗಳ ಪೈಕಿ ಒಂದು ಕ್ರಮವನ್ನು ಇಲ್ಲಿ ವಿವರಿಸಿದ್ದೇವೆ.

ಕೃತಕ ರತ್ನ ತಯಾರಿಸಲು ಬೇಕಾದ ವಸ್ತುಗಳು ಮತ್ತು ಅವುಗಳ ಪ್ರಮಾಣ ಈ ರೀತಿ ಇದೆ.

1. ಸಿಂಧೂರ – 75 ಭಾಗ
2. ಶುದ್ಧವಾದ ಬಿಳಿ ಮರಳು – 50 ಭಾಗ
3. ಭಸ್ಮಮಾಡಿದ ಫಟಿಕ – 18 ಭಾಗ
4. ಭಸ್ಮಮಾಡಿದ ಬಿಳಿಗಾರ – 6 ಭಾಗ
5. ಸಂಬಳಕಾರ – 1 ಭಾಗ

ಮೊದಲು ಮರಳನ್ನು ಹೈಡ್ರೋಕ್ಲೋರಿಕ್ ಆಮ್ಲದಲ್ಲಿ ಚೆನ್ನಾಗಿ ತೊಳೆಯಬೇಕು. ಘಟಕ ಮತ್ತು ಬಿಳಿಗಾರವನ್ನು ಕಾಯಿಸಿದರೆ ಚೆನ್ನಾಗಿ ಭಸ್ಮವಾಗುವುದು. ಈ ಮೇಲಿನ ವಸ್ತುಗಳನ್ನು ಕೂಡಿ ಕರಗಿಸಿದಲ್ಲಿ ಗಾಜಿನಂತೆ ಆಗುವುದು, ರತ್ನಗಳ ಹರಳಿನ ರೂಪಕ್ಕೆ ಬರುವುದು.

## ನೈಜ ರತ್ನಗಳನ್ನು ಗುರುತಿಸುವ ವಿಧಾನ

**1. ಮಾಣಿಕ್ಯ :** ಘಪಸಿನಲ್ಲಿ ವಜ್ರಕ್ಕೆ ಎರಡನೆಯದೆನಿಸಿರುವ ಈ ಕೆಂಪು ರತ್ನವನ್ನು ಒಂದು ಲೋಟ ಹಾಲಿನಲ್ಲಿ ಮುಳುಗಿಸಿಟ್ಟರೆ ಈ ರತ್ನದ ಕೆಂಪು ವರ್ಣ ಹಾಲಿಗೆ ಪ್ರಸರಿಸಿ ಹಾಲಿನ ವರ್ಣ ಕೆಂಪು ಆಗುವುದು.

ಇನ್ನೊಂದು ಪರೀಕ್ಷೆಯೆಂದರೆ ಬೆಳ್ಳಿಯ ತಟ್ಟೆಯಲ್ಲಿ ಈ ರತ್ನವನ್ನಿಟ್ಟು ಸೂರ್ಯನ ಬೆಳಕು (ಬಿಸಿಲು) ಬೀಳುವಂತೆ ಮಾಡಿದರೆ ತಟ್ಟೆಯು ಕೇಸರಿ ವರ್ಣವನ್ನು ಹೊಂದಿರುವಂತೆ ಕಾಣುವುದು. ಹೀಗೆ ನೈಜ ಮಾಣಿಕ್ಯವನ್ನು ಪರೀಕ್ಷಿಸಿ ಉಪಯೋಗಿಸಬಹುದು.

**2. ಮುತ್ತು :** ನೈಜ ಮುತ್ತು ಅಥವಾ ಕೃತಕ ಮುತ್ತು ಎಂದು ನಿರ್ಧರಿಸಲು ಗೋ ಮೂತ್ರದಲ್ಲಿ ಒಂದು ದಿನ ಇಟ್ಟರೆ ಗೊತ್ತಾಗುವುದು. ಕೃತಕ ಮುತ್ತುಗಳಾದರೆ ಸೀಳುಬಿಡುವುದು. ವಿವರ್ಣವಾಗುವುದು. ಶುದ್ಧ ಮುತ್ತು ಯಾವ ರೀತಿಯಲ್ಲೂ ಬದಲಾಯಿಸದು.

**3. ಹವಳ :** ಬೇಕಾದ ಆಕಾರಕ್ಕೆ ನೈಜ ಹವಳವನ್ನು ಕತ್ತರಿಸಿ, ವಿಗ್ರಹ, ಉಂಗುರ, ಆಭರಣಗಳ ತಯಾರಿಕೆಗೆ ಬಳಸುವರು. ಕೃತಕ ಹವಳ ಇಷ್ಟಪಡುವ ಆಕಾರಕ್ಕೆ ತರಲು ಸಾಧ್ಯವಿಲ್ಲ.

**4. ಪಚ್ಚೆ :** ನೈಜವಾದ ಪಚ್ಚೆಯತ್ತ (ಮರಕತ) ನಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದರೆ ಕಣ್ಣುಗಳಲ್ಲಿ ಉರಿಯಾಗದು, ತಂಪು ಅನುಭವವಾಗುತ್ತೆ. ಕೃತಕ ಪಚ್ಚೆಯನ್ನು ದೃಷ್ಟಿಕರಿಸಿದರೆ ಕಣ್ಣುಗಳಿಗೆ ಬಾಧೆಯುಂಟಾಗುವುದು.

**ಎರಡನೇ ಪರೀಕ್ಷೆ :** ಕೃತಕ ಪಚ್ಚೆಯನ್ನು ಒಂದು ಶಿಲೆ ಅಥವಾ ಮರದ ತುಂಡಿನ ಮೇಲೆ ಉಜ್ಜಿದರೆ ಪ್ರಕಾಶ ಹೆಚ್ಚುವುದು. ಅಷ್ಟೇ ಅಲ್ಲದೆ ಕೃತಕ ಪಚ್ಚೆ ನೈಜ ಪಚ್ಚೆಗಿಂತಲೂ ತೂಕವೂ ಹೆಚ್ಚಾಗಿರುತ್ತೆ. ಮತ್ತೂ ಹೆಚ್ಚಿನ ವಿಷಯವೆಂದರೆ ಅತಿಶುದ್ಧವಾದ ಪಾರದರ್ಶಕವುಳ್ಳ ಪಚ್ಚೆ ಸಿಗುವುದು ದುರ್ಲಭ. ಲೋಹ ಸಂಬಂಧಿಕ ವಸ್ತುಗಳು ನೈಜ ಪಚ್ಚೆಯಲ್ಲಿ ಕಾಣಿಸುತ್ತವೆ.

**5. ಪುಷ್ಪರಾಗ :** ವಿಷವಸ್ತುಗಳ ಮುಂದೆ ನೈಜ ಪುಷ್ಪರಾಗ ತನ್ನ ವರ್ಣವನ್ನು ಬದಲಾಯಿಸಿಕೊಳ್ಳುವುದು. ವಜ್ರದಷ್ಟೇ ಪ್ರಕಾಶಮಾನವುಳ್ಳ ಶುದ್ಧ ಪುಷ್ಪರಾಗವನ್ನು ವಜ್ರಕ್ಕೆ ಬದಲಾಗಿ ಮಾರಿ ಮೋಸ ಮಾಡಿರುವ ನಿದರ್ಶನಗಳಿವೆ. ಎಚ್ಚರವಿರುವುದು ಅಗತ್ಯ.

**6. ವಜ್ರ :** ನೈಜ ವಜ್ರವನ್ನು ಕೃತಕ ರತ್ನದಿಂದ ಗುರುತು ಹಿಡಿಯುವುದು ಸುಲಭ ಸಾಧ್ಯವಲ್ಲ. ಅನೇಕ ಸಾರಿ ಉಪರತ್ನವಾದ ವೈಕ್ರಾಂತವನ್ನು ವಜ್ರಕ್ಕೆ ಬದಲಾಗಿ ಮಾರಿ ಮೋಸಪಡಿಸಿಯಾರು ಎಚ್ಚರವಹಿಸಿ.

ನೈಜ ವಜ್ರಪರೀಕ್ಷೆಯ ಒಂದು ಕ್ರಮವನ್ನು ಇಲ್ಲಿ ತಿಳಿಸಿದ್ದೇವೆ. ಪರೀಕ್ಷಿಸಿ ನೋಡಿ ಸ್ವಲ್ಪ ಬಿಸಿಯಾಗಿರುವ ಕಾದ ಹಾಲಿನಲ್ಲಿ ವಜ್ರವನ್ನು ಹಾಕಿದರೆ ಅದು ಕೂಡಲೆ ತಣ್ಣಗಾಗುವುದು.

ವಜ್ರ ದೊರಕದಿದ್ದಾಗ ವೈಕ್ರಾಂತವನ್ನು ಬಳಸಬಹುದೆಂದು ಹಿಂದಿನ ಲೇಖನದಲ್ಲಿ ತಿಳಿಸಿದ್ದೇವೆ. ವೈಕ್ರಾಂತದಂತೆ ಕೃತಕ ರತ್ನ ತಯಾರಿಸಲಾಗದು.

**ಪ್ರಯೋಗಶಾಲೆಯಲ್ಲಿ ರತ್ನಗಳ ಪರೀಕ್ಷಾ ವಿಧಾನ**

1. ಫೋಟೋಗ್ರಾಫ್ ಹಾಕುವ ಕನ್ನಡಿಯನ್ನು ತಂದು ಅದನ್ನು ಕಿತ್ತಳೆ ಹಣ್ಣಿನ ಬಣ್ಣದ ಕವರಿನಲ್ಲಿಟ್ಟು ಮುಚ್ಚಿ ಅದರ ಮೇಲೆ ದಪ್ಪವಾದ ಕಪ್ಪು ಕಾಗದವನ್ನು ಮೂರು ಮಡಿಕೆಯಾಗಿ ಮಡಿಸಿ, ಕನ್ನಡಿಯ ಸುತ್ತಲೂ ಸುತ್ತಬೇಕು. ಅದನ್ನು ಫೋಟೋಗ್ರಾಪ್ ಯಂತ್ರದಲ್ಲಿಟ್ಟು ಪರೀಕ್ಷಿಸಬೇಕಾದ ರತ್ನವನ್ನು ಅದರ ಮುಂದಿಟ್ಟು ಫೋಟೋ ಎತ್ತಿದರೆ ಒಳ್ಳೆಯ ರತ್ನವಾದ ಪಕ್ಷದಲ್ಲಿ ಛಾಯದೃಶ್ಯ ದೃಶ್ಯವಾಗಿ ಬಂಗಾರ ಛಾಯೆಯಲ್ಲಿಯೂ, ಕಪ್ಪಗೂ, ಸ್ಪಷ್ಟವಾಗಿಯೂ ಕಾಣುವುದು. ಕೃತಕ ರತ್ನ (ಗಾಜುಲು ಇತ್ಯಾದಿ ಬೆಂಕಿಯಿಂದ ತಯಾರಿಸಲ್ಪಟ್ಟ ರತ್ನ) ವಾಗಿದ್ದರೆ ಕನ್ನಡಿಯ ಮೇಲೆ ಚುಕ್ಕೆ ಚುಕ್ಕೆಯಾಗಿ ಪ್ರತಿಬಿಂಬಗಳು ಕಾಣಿಸುವುದು. ಬಂಗಾರಛಾಯೆ ಕಾಣಿಸುವುದಿಲ್ಲ. ಇದೇ ರೀತಿ ಮುತ್ತುಗಳನ್ನು ಪರೀಕ್ಷಿಸಬಹುದು. ಈ ರೀತಿಯ ಪರೀಕ್ಷೆಗಳು ರತ್ನಶಾಸ್ತ್ರ ತಜ್ಞರಿಂದ ಮಾತ್ರ ಸಾಧ್ಯ.

2. ಹೈಡ್ರೋಕ್ಲೋರಿಕ್ ದ್ರಾವಕದಲ್ಲಿ ನೈಜ ವಜ್ರಗಳನ್ನು ಹಾಕಿದರೆ ಅವು ಕರಗುವುದಿಲ್ಲ. ಗಾಜಿನ ಕೃತಕ ರತ್ನಗಳು ಕರಗುತ್ತವೆ.

3. ನೈಜ ರತ್ನಗಳನ್ನು ಅದರ ಮೇಲೆ ಗೀಚಿದರೆ (Scratching on a File) ಅವುಗಳ ಮೇಲೆ ಗೆರೆಗಳುಂಟಾಗುವುದಿಲ್ಲ. ಅದೇ ಕೃತಕವಾಗಿದ್ದಲ್ಲಿ ಗೆರೆಗಳು ಸ್ಪಷ್ಟವಾಗಿ ಬೀಳುತ್ತವೆ.

4. ನೈಜ ರತ್ನಗಳನ್ನು ಬೆಂಕಿಯಲ್ಲಿ ಕಾಯಿಸಿದಾಗ ಸೀಳು ಬಿಡುವುದಿಲ್ಲ. ಗಾಜು ಅಥವಾ ಇತರ ಕೃತಕ ರತ್ನವಾಗಿದ್ದ ಪಕ್ಷದಲ್ಲಿ ಒಡೆದು ಸೀಳಾಗುವುದು.

5. ಒಂದು ತಂಬಿಗೆ ನೀರಿನಲ್ಲಿ ನಿಜವಾದ ವಜ್ರ ಹಾಕಿದರೆ ಅದರ ಪ್ರಕಾಶವನ್ನು ಹೊರಗಡೆ ನೋಡಲು ಸಾಧ್ಯ. ಕೃತಕವಾದ ರತ್ನ ನೀರಿನಲ್ಲಿ ಹಾಕಿದರೆ ಅದರ ಪ್ರಕಾಶ ಕಾಣಿಸುವುದಿಲ್ಲ

6. ಕೃತಕ ರತ್ನವನ್ನು ಬಾಯಲ್ಲಿಟ್ಟುಕೊಂಡರೆ ಆ ರತ್ನದಲ್ಲಿ ಶಾಖ ಉತ್ಪತ್ತಿಯಾಗುವುದು ಹಾಗೂ ಬಾಯಲ್ಲಿ ಯಾವ ರೀತಿಯ ಬದಲಾವಣೆ ಕಾಣಲಾರಿರಿ. ತುಟಿಯ ಮಧ್ಯೆ ನೈಜ ರತ್ನವನ್ನು (ಬಾಯಲ್ಲಿ) ಇರಿಸಿಕೊಂಡರೆ ಶೀತಲದ ಅನುಭವ ಪಡೆಯುವಿರಿ.

## ಕೃತಕ ರತ್ನಗಳು ಅಪ್ರಯೋಜಕ

ನೈಸರ್ಗಿಕವಾಗಿ ದೊರಕುವ ರತ್ನ ಹಾಗೂ ಉಪರತ್ನಗಳಿಗಿಂತಲೂ ಇಂದು ಆಭರಣಗಳಲ್ಲಿ ಬಳಸಲ್ಪಡುವ ಕೃತಕ ರತ್ನಗಳು ಗಾಜು ಮುಂತಾದ ರಾಸಾಯನಿಕ ಸಂಯೋಜನೆಯಿಂದ ತಯಾರಿಸಲ್ಪಟ್ಟವುಗಳಾಗಿವೆ. ಇವುಗಳು ನಮಗೆ ಬೇಕೆನಿಸುವ ಗಾತ್ರ, ಆಕಾರ, ವರ್ಣಗಳಲ್ಲಿ ಹೆಚ್ಚು ಪ್ರಕಾಶಮಾನವಾಗಿಯೂ, ಪಾರದರ್ಶಕವಾಗಿಯೂ, ಶುದ್ಧವಾಗಿಯೂ ಇರುವಂತೆ ಕಂಡರೂ ಯಾವುದೇ ರೀತಿಯ ಫಲವುಂಟು ಮಾಡಲಾರದು. ನೈಜ ರತ್ನಗಳಿಗೂ ಕೃತಕ ರತ್ನಗಳಿಗೂ ಇರುವ ವ್ಯತ್ಯಾಸವನ್ನು ಕಂಡುಹಿಡಿಯಬೇಕಾದರೆ ರತ್ನಶಾಸ್ತ್ರಜ್ಞನೇ ಅವಶ್ಯಕ ಕೃತಕ ರತ್ನಗಳಿಂದ ವೈದ್ಯಕೀಯ ಪ್ರಯೋಗವು ಅಸಾಧ್ಯ. ಆದ್ದರಿಂದ ಈ ರತ್ನಗಳಂತೆ ಹೋಲಿಕೆಯುಳ್ಳ ಈ ಕೃತಕ ರತ್ನಗಳ ಬಗ್ಗೆ ಕೆಲವು ಮಾಹಿತಿ ಕೊಟ್ಟದ್ದೇವೆ. ಅದರಿಂದ ನೈಜ ರತ್ನಕ್ಕೂ ಕೃತಕ ರತ್ನಕ್ಕೂ ಇರುವ ಗುಣ ವ್ಯತ್ಯಾಸ ತಿಳಿದು ಸೂಕ್ತ ರೀತಿಯಲ್ಲಿ ಉಪಯೋಗ ಮಾಡಬೇಕು.

## ನವರತ್ನಾಭರಣ ಸಂಗ್ರಹ ಮತ್ತು ಧಾರಣೆ ಬಗ್ಗೆ ನಕ್ಷತ್ರ ಚೂಡಾಮಣಿ

ಪದ್ಮನಾಭ ದೈವಜ್ಞನು ತನ್ನ ಜ್ಯೋತಿಷ್ಯ ಗ್ರಂಥ "ನಕ್ಷತ್ರ ಚೂಡಾಮಣಿ"ಯಲ್ಲಿ ಯಾವ ದಿನ ಯಾವ ನಕ್ಷತ್ರವಿದ್ದಾಗ (ಚಂದ್ರನಿರುವ ನಕ್ಷತ್ರ ಅಥವ ದಿನ ನಕ್ಷತ್ರ) ಪ್ರವಾಳ, ಮುಕ್ತಾಮಣಿ ಸಂಗ್ರಹಕ್ಕೆ ಶುಭವೆಂದು ತಿಳಿಸಿದ್ದಾನೆ. ಹಾಗೆಯೇ ಯಾವ ನಕ್ಷತ್ರವಿರುವ ದಿನ ಆಭರಣಗಳ ಧಾರಣೆ ಮಾಡಬೇಕೆಂದು ತಿಳಿಸಿದ್ದಾನೆ. ಅದರ ಸಂಗ್ರಹ—

**ಪ್ರವಾಳ ಮುಕ್ತಾಮಣಿ ರತ್ನಗಳ ಸಂಗ್ರಹಕ್ಕೆ**

1. ಶತಭಿಷಾ ನಕ್ಷತ್ರವಿರುವ ದಿನ ಗಣಿಗಳಿಂದ ರತ್ನಗಳನ್ನು ತೆಗೆಯಲು ಮತ್ತು ಖರೀದಿಸಿ ಮನೆಗೆ ತರಲು ಪ್ರಾಶಸ್ತ್ಯವಿದೆ.
2. ಪೂರ್ವಾಷಾಢ ನಕ್ಷತ್ರದಲ್ಲಿ ಮುತ್ತು ರತ್ನಗಳನ್ನು ಕೊಂಡುಕೊಳ್ಳುವುದು ಶುಭಪ್ರದ.
3. ಸ್ವಾತಿ ನಕ್ಷತ್ರದಲ್ಲಿ ಮುತ್ತುಗಳನ್ನು ಸಂಗ್ರಹಿಸಬೇಕು.
4. ಅನುರಾಧ ನಕ್ಷತ್ರವಿರುವ ದಿನ ರತ್ನ ಪರೀಕ್ಷೆ ಮಾಡುವುದು.
5. ಮೂಲಾ ನಕ್ಷತ್ರವಿರುವ ದಿನ ರತ್ನ ಸಂಗ್ರಹಣೆ ಮಾಡಬಹುದು.
6. ರೇವತಿ ನಕ್ಷತ್ರವಿರುವ ದಿನವೂ ರತ್ನ ಸಂಗ್ರಹಣೆಗೆ ಶುಭ.

## ರತ್ನಗಳ ಬಗ್ಗೆ ಮತ್ಸ್ಯಪುರಾಣ ಮತ್ತು ಮಹಾಭಾರತದಲ್ಲಿ – 11

**"ಅಶೂನ್ಯ ಶಯನ ವ್ರತ ಆಚರಿಸಿ ದಾಂಪತ್ಯ ವಿಯೋಗ ತಡೆಗಟ್ಟಿ"**

**ಆಧಾರ : ಮತ್ಸ್ಯ ಪುರಾಣ ಅಧ್ಯಾಯ**

ಶ್ರಾವಣಮಾಸ, ಕೃಷ್ಣಪಕ್ಷ, ಬಿದಿಗೆ – ಶ್ರೀ ಲಕ್ಷ್ಮೀನಾರಾಯಣರನ್ನು ಆರಾಧಿಸಿ, ಗೋದಾನ, ಹಿರಣ್ಯದಾನಗಳನ್ನು ಮಾಡಿ ಮಹಾಫಲ ಪಡೆಯುವರು. ಇದರಿಂದ ಪತಿ-ಪತ್ನಿಯರಿಗೆ ಎಂದೂ ವಿಯೋಗ ಉಂಟಾಗುವುದಿಲ್ಲ. ವೈರೂಪ್ಯ ವೈರಸ್ಯ, ವ್ಯಾಧಿ, ವ್ಯಥೆಗಳಲ್ಲಿ ಒಂದೂ ಒದಗುವುದಿಲ್ಲ. ಸೂರ್ಯ-ಚಂದ್ರರಿರುವ ವರೆಗೆ ಈ ವ್ರತ ಮಾಡಿದ ಸತಿಗೆ ಮಾಂಗಲ್ಯಕ್ಕೆ ಚ್ಯುತಿಯಿಲ್ಲ. ಪಶು ಪುತ್ರ, ರತ್ನ ಸಂಪತ್ತು ಇವುಗಳಿಗೆ ಕೊರತೆ ಆಗುವುದಿಲ್ಲ. ಹೀಗೆಂದು ಮತ್ಸ್ಯಪುರಾಣದಲ್ಲಿ ನುಡಿದಿರುವುದರಿಂದ ನವರತ್ನಗಳನ್ನು ಪಡೆಯಲು ಈ ವ್ರತ ಆಚರಿಸುವುದು ಸೂಕ್ತವಲ್ಲವೇ ?

**"ರತ್ನಶೈಲ ದಾನದಿಂದ ವಿಷ್ಣುಲೋಕ ಪ್ರಾಪ್ತಿ"**

**ಆಧಾರ : ಮತ್ಸ್ಯಪುರಾಣ 90ನೇ ಅಧ್ಯಾಯ**

ಸಾವಿರ ಮುತ್ತುಗಳಿಂದ ರತ್ನಪರ್ವತ ನಿರ್ಮಿಸುವುದು ಉತ್ತಮ. ಐದುನೂರು ಮುತ್ತುಗಳಿಂದ ಪರ್ವತಾಕಾರ ನಿರ್ಮಿಸುವುದು ಮಧ್ಯಮ. ಮೂರುನೂರು ಮುತ್ತು ಗಳಿಂದ ರಚಿಸುವುದು ಅಧಮ. ಇಂತಹ ಪರ್ವತದ ನಾಲ್ಕು ದಿಕ್ಕುಗಳಲ್ಲಿ—

ಪೂರ್ವ ದಿಕ್ಕಿನಲ್ಲಿ ವಜ್ರ, ಗೋಮೇಧಿಕಗಳಿಂದ ;
ದಕ್ಷಿಣ ದಿಕ್ಕಿನಲ್ಲಿ ಇಂದ್ರನೀಲ, ಪದ್ಮರಾಗಗಳಿಂದ ;
ಪಶ್ಚಿಮ ದಿಕ್ಕಿನಲ್ಲಿ ಹವಳ ವೈಢೂರ್ಯಗಳಿಂದ ;
ಉತ್ತರ ದಿಕ್ಕಿನಲ್ಲಿ ಚಿನ್ನ ಹಾಗೂ ಕೆಂಪು ಹರಳುಗಳಿಂದ ;

ಪರ್ವತದ ಕಾಲುಭಾಗ ಆಳತೆಗೆ ಸರಿಯಾಗಿ ನಾಲ್ಕು ಸಣ್ಣ ಸಣ್ಣ ಬೆಟ್ಟಗಳನ್ನು ನಿರ್ಮಿಸಬೇಕು. ವಿಧಿ ವಿಧಾನಗಳಿಂದ ಪ್ರಾತಃಕಾಲದಲ್ಲಿ ಪೂಜಿಸಿ ಆಚಾರ್ಯರಿಗೆ ದಾನ ಕೊಡಬೇಕು.

ರತ್ನ ದಾನದಿಂದ ವಿಷ್ಣುವಿಗೆ ಪ್ರೀತಿ "ಎಲೈ ಪರ್ವತವೇ ನಿನ್ನ ದಾನದಿಂದ ನಿರಂತರವೂ ರತ್ನಗಳು ದೊರಕುವಂತಾಗಲಿ ರತ್ನಗಳಲ್ಲೆಲ್ಲಾ ದೇವತಾ ಸನ್ನಿದಾನ ಇರುವುದು. ರತ್ನಮಯವಾದ ಪರ್ವತವೇ ನಿನಗೆ ನಮಸ್ಕಾರ ನೀನು ನಮ್ಮನ್ನು ರಕ್ಷಿಸು".

ಹೀಗೆ ಹೇಳಿ ರತ್ನ ಪರ್ವತ ದಾನವಮಾಡುವವನು ದೇವೇಂದ್ರನಿಂದ ಪೂಜಿತನಾಗಿ ವಿಷ್ಣುಲೋಕದಲ್ಲಿ ವಾಸಮಾಡುವನು. ಅವನು ಮಾಡಿದ ಸಮಸ್ತ ಪಾಪಗಳು ಪರಿಹಾರವಾಗುತ್ತವೆ. ನಿರಂತರವಾಗಿ ರತ್ನಗಳು ದೊರಕಿ ದೇವತಾ ಸಾನ್ನಿಧ್ಯವು ಉಂಟಾಗುತ್ತದೆ.

## ವೈಕುಂಠ ಪ್ರಾಪ್ತಿಗಾಗಿ ರತ್ನಧೇನುವಿನ ಮಹಾದಾನ ಮಾಡಿರಿ

ಮತ್ಸ್ಯಪುರಾಣದ 287ನೇ ಅಧ್ಯಾಯದಲ್ಲಿ ವಿಷ್ಣುಲೋಕ ಪ್ರಾಪ್ತಿಗಾಗಿ ರತ್ನದ ಆಕಳನ್ನು ನಿರ್ಮಿಸಿ ಮಹಾದಾನವನ್ನು ಕೊಡುವ ವಿಧಿಯನ್ನು ವಿವರಿಸಲಾಗಿದೆ.

ಶುಭ ಮುಹೂರ್ತದಲ್ಲಿ ಎಲ್ಲ ಸಿದ್ಧತೆ ಮಾಡಿಕೊಂಡು ಕೃಷ್ಣಾಜಿನವನ್ನು ನೆಲದ ಮೇಲೆ ಹಾಸಿ ಅದರ ಮೇಲೆ ಉಪ್ಪಿನ ದೊನ್ನೆಯನ್ನು ಇಟ್ಟು, ರತ್ನದ ಧೇನುವನ್ನು ನಿರ್ಮಿಸಿ ಆ ದೊನ್ನೆಯ ಮೇಲೆ ಇಡುವರು.

89 ಪದ್ಮರಾಗ ಮಣಿಗಳಿಂದ ಅದರ ಮುಖವನ್ನು
100 ಪುಷ್ಪರಾಗಗಳಿಂದ ಅದರ ಕೊರಳನ್ನು
100 ಮುತ್ತುಗಳಿಂದ-ಬಂಗಾರದ ತಿಲಕವುಳ್ಳ ಅದರ ಹವಳಗಳಿಂದ ಹುಬ್ಬು ಕಣ್ಣುಗಳನ್ನು
100 ವಜ್ರಗಳಿಂದ ಅದರ ತಲೆಯನ್ನು
100 ಗೋಮೇಧಿಕಗಳಿಂದ ಅದರ ಕೊರಳ ಸರವನ್ನು

100 ಇಂದ್ರನೀಲದಿಂದ ಅದರ ಬೆನ್ನನ್ನು
3 ವೈಢೂರ್ಯಗಳಿಂದ ಅದರ ಎರಡು ಬದಿಗಳನ್ನು
ಸ್ಫಟಿಕಗಳಿಂದ ಹೊಟ್ಟೆಯನ್ನು
ಸೌಗಂಧಿಕಾ ರತ್ನದಿಂದ ಸೊಂಟವನ್ನು
ಬಂಗಾರದಿಂದ ಖುರಗಳನ್ನು (ಕೊಂಬು)
ಮುತ್ತಿನ ಗುಚ್ಛಗಳಿಂದ ಬಾಲವನ್ನು
ಚಂದ್ರಕಾಂತ, ಸೂರ್ಯಕಾಂತ ಮಣಿಗಳಿಂದ ಮೂಗನ್ನು
ಬೆಳ್ಳಿಯಿಂದ ಹೊಕ್ಕುಳನ್ನು

ಗರುಡಮಣಿಯಿಂದ ಕೆಚ್ಚಲನ್ನು, ಕೂಡಿಸಿ ರತ್ನಧೇನುವನ್ನು ಅಲಂಕರಿಸಿ. ಈ ರತ್ನಧೇನುವಿನಲ್ಲಿ ಉಪಯೋಗಿಸಲ್ಪಟ್ಟ 1/4 ಭಾಗದ ಮತ್ತು ರತ್ನಗಳಿಂದ ಅದರ ಕರುವನ್ನು ನಿರ್ಮಿಸಿ ಋತ್ವಿಜರಿಂದ ಸಂಕಲ್ಪಮಾಡಿ ಹವನ ಹೋಮವ ಮಾಡಿಸಿ ವಿಪುಲ ದಕ್ಷಿಣೆಯನ್ನು ಕೊಟ್ಟು ಎಲ್ಲಾ ದೇವತೆಗಳ ಚರಾಚರಾತ್ಮಕ ವಸ್ತುಗಳ ಆವಾಸ ಸ್ಥಾನವೆಂದು ಆ ಧೇನುವಿನಲ್ಲಿ ಭಾವಿಸಿ ಮಾಡಿಸುವ ಯಜಮಾನನು ಉಪವಾಸವಿದ್ದು ದಾನಮಾಡಿದರೆ ವಿಷ್ಣುಲೋಕ (ವೈಕುಂಠ) ಪ್ರಾಪ್ತಿಯಾಗುತ್ತದೆ.

**ಶುಭಕರ್ಮ ಮಾಡಿದವರಿಗೆ ವೈಢೂರ್ಯದ ಚಾಮರ ಛತ್ರಗಳ ಲಭ್ಯ**

**ಶ್ಲೋಕ ||** ರುಕ್ಮವೈಢೂರ್ಯದಂಡಾನಿ ಚಂಡಾನಿ ಚಂಡಾಂಶು ಸದೃಶಾನಿಚ ।
ಚಾಮರಾಣಿ ಸುರಾಧ್ಯಕ್ಷ ಭವಂತಿ ಶುಭ ಕರ್ಮಣಾ ॥

(ಮೇಲಿನ ಶ್ಲೋಕ ಮತ್ಸ್ಯಪುರಾಣದ 2ನೇ ಭಾಗದ್ದು)

**ಅರ್ಥ :** ಬಂಗಾರದ ಹಿಡಿಕೆ, ವೈಢೂರ್ಯದ ದಂಡವುಳ್ಳ ಸೂರ್ಯನಂತೆ ಹೊಳೆಯುವ ಛತ್ರ ಚಾಮರಗಳು ಶುಭ ಕರ್ಮಗಳನ್ನು ಮಾಡಿದವರಿಗೆ ಮಾತ್ರ ಲಭಿಸುತ್ತವೆ ಎಂದಂತಾಯಿತು. ರಾಜಭೋಗದ ವೈಢೂರ್ಯದಂಡವುಳ್ಳ ಛತ್ರ ಚಾಮರ ರಾಜರಿಗೆ ಮಾತ್ರ ಸೀಮಿತವಾದದ್ದು. ಇಂತಹ ರಾಜಯೋಗವನ್ನು ಪಡೆಯಲು ಸುಕರ್ಮ ಮಾಡಿದ್ದರೆ ಮಾತ್ರ ಸಾಧ್ಯ.

**ವಿ. ಸೂ :** ಶುಭ ಕರ್ಮಗಳು ಎಂದರೆ ಜನ್ಮ ಜನ್ಮಾಂತರದ್ದು. ಕೇವಲ ಪ್ರಸ್ತುತ ಕರ್ಮವೇ ಅಲ್ಲ.

ಇದೇ ರೀತಿ ಮತ್ತೊಂದು ಕಡೆ—

**ಶ್ಲೋಕ ||** ವರಾನ್ನಪಾನಂ ಪೀತಂಚ ಭೃತ್ಯಮಾಲ್ಯಾನುಲೇಪನಂ ।
ರತ್ನಾವಸ್ತ್ರಾಣಿ ಮುಖ್ಯಾನಿಫಲಂ ಪುಣ್ಯಸ್ಯಕರ್ಮಣಃ ॥

ಎಂದು ಹೇಳಿರುವುದರಿಂದ ರತ್ನದ ಆಭರಣಗಳು ಇತ್ಯಾದಿ ಮಾನವನಿಗೆ ಲಭಿಸಲು ಅವನು ಹಿಂದಿನ ಜನ್ಮದಲ್ಲಿ ಮಾಡಿರುವ ಪುಣ್ಯ ಕರ್ಮಗಳೇ ಕಾರಣ ಎಂದು ಅರ್ಥವಾಗುತ್ತದೆ.

**ದೇವತಾ ವಿಗ್ರಹಗಳ ಪ್ರತಿಷ್ಠಾಪನಾ ಕಾರ್ಯದಲ್ಲಿ ರತ್ನಗಳ ಅವಶ್ಯಕತೆ**
(ಆಧಾರ : ಮತ್ಸ್ಯಪುರಾಣ, ಅಧ್ಯಾಯ 265)

ಹಿಂದೂ ದೇವಾಲಯಗಳ ಗರ್ಭಗುಡಿಯಲ್ಲಿ ದೇವತಾ ಪ್ರತಿಷ್ಠಾಪನಾ ಪೂರ್ವದಲ್ಲಿ ಮೂರ್ತಿಗಳನ್ನು ಸ್ಥಾಪನೆಮಾಡುವ ಸ್ಥಳದಲ್ಲಿ ತಗ್ಗುಮಾಡಿ ವಜ್ರ, ಮುತ್ತು, ವೈಢೂರ್ಯ, ಶಂಖ, ಸ್ಫಟಿಕ, ಪುಷ್ಪರಾಗ, ಇಂದ್ರನೀಲ, ರತ್ನಗಳನ್ನು ಪೂರ್ವ, ಆಗ್ನೇಯ, ದಕ್ಷಿಣ, ನೈರುತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ ಈ ರೀತಿ ಅಷ್ಟ ದಿಕ್ಕುಗಳಲ್ಲಿ ಕ್ರಮವಾಗಿರಿಸಿ, ಎಂಟು ಬಗೆ ಧಾನ್ಯಗಳನ್ನು, ಎಂಟು ಬಗೆ ವನಸ್ಪತಿಗಳನ್ನು, ಎಲ್ಲ ಬಗೆಯ ಬೀಜ, ಖನಿಜ, ರತ್ನಧಾತುಗಳು, ಪದ್ಮರಾಗ ಮುಂತಾದವುಗಳೊಂದಿಗೆ ಸ್ಥಾಪಿಸುವರು.

ಇದರಿಂದ ದೇವತಾ ಪ್ರತಿಷ್ಠಾಪನಾ ಕಾರ್ಯದಲ್ಲೂ ನವರತ್ನಗಳ ಪ್ರಾಮುಖ್ಯತೆ ಎಷ್ಟೆಂದು ನಮಗೆ ಅರಿವಾಗುವುದಿಲ್ಲವೇ ?

**ಮಣಿ ಮಂತ್ರಗಳ ಮಹಾತ್ಮೆ ಮಹಾಭಾರತದಲ್ಲಿ**

ಭಾರತೀಯ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕ ಗ್ರಂಥಗಳೆನಿಸಿದ ರಾಮಾಯಣ, ಮಹಾಭಾರತಗಳಲ್ಲಿ ಮಣಿ ಮಂತ್ರಗಳ ಪ್ರಭಾವಶಕ್ತಿ ಅನೇಕ ಕಡೆ ವಿಶ್ಲೇಷಿಸಲ್ಪಟ್ಟಿದೆ. ಪ್ರಸ್ತುತ ಗ್ರಂಥವು ಮಣಿಗಳ ಮಹಾತ್ಮೆಗೆ ಸಂಬಂಧಿಸಿದ್ದುದಾದ್ದರಿಂದ ಮಂತ್ರಗಳ ಪ್ರಯೋಗಗಳನ್ನು ಬಿಟ್ಟು ಮಣಿಗಳ ಅಗೋಚರ ಶಕ್ತಿಯ ವಿಷಯವಾಗಿ ವಿಮರ್ಶಿಸಲಾಗಿದೆ.

ಮಹಾಭಾರತ ಸೌಕ್ತಿಕ ಪರ್ವ, ಅಧ್ಯಾಯ 15 ಮತ್ತು 16ರಲ್ಲಿ ಚಿರಂಜೀವಿ ಎನಿಸಿದ ಅಶ್ವತ್ಥಾಮನ ಶಿರಸ್ಸಿನಲ್ಲಿ ಇದ್ದ ಮಣಿಯ ಮಹಾತ್ಮೆಯನ್ನು ನಾವು ತಿಳಿಯಬಹುದು.

ಅಶ್ವತ್ಥಾಮನೇ ನುಡಿಯುವಂತೆ ಪಾಂಡವ ಕೌರವಾದಿಗಳಲ್ಲಿ ಸಂಗ್ರಹಿಸಲ್ಪಟ್ಟಿರುವ ಐಶ್ವರ್ಯಗಳನ್ನು ಒಟ್ಟುಗೂಡಿಸಿದರೆ ಅದಕ್ಕೂ ಮಿಗಿಲಾದ ಮೌಲ್ಯವು ತನ್ನ ಶಿರಸ್ಸಿನಲ್ಲಿರುವ ಮಣಿಯು ಹೊಂದಿದೆಯೆಂದು ತಿಳಿಸಿರುತ್ತಾನೆ. ಇಲ್ಲಿ ಕೊಟ್ಟಿರುವ ಎರಡು ಮಹಾಭಾರತದ ಶ್ಲೋಕಗಳ ಮೂಲಕ ಈ ಮಣಿಯ ಪ್ರಭಾವವನ್ನು ನಾವು ಅರಿಯಬಹುದು.

**ಶ್ಲೋಕ** ॥ ಯಮಾಬಧ್ಯ ಭಿಯಂ ನಾಸ್ತಿ ಶಸ್ತ್ರವ್ಯಾಧಿಕ್ಷುಧಾಶ್ರಯಮ್ ।
ದೇವೇಭ್ಯೋದಾನವೇಭ್ಯೋಪಾ ನಾಗೇಭ್ಯೋವಾಕಥಂಚನ ॥

ನಚರಕ್ಷೋಗಣ ಭಯಂ ನ ತಸ್ಕರ ಭಯಂತಥಾ ।
ಏವಂವೀರ್ಯೋಮಣಿ ರಯಂ ನಮೇತ್ಯಾಜ್ಯಃಕಥಂಚನ ॥

**ಮೇಲಿನ ಶ್ಲೋಕಗಳ ಅರ್ಥ** :

ಆ ಶಿರೋಮಣಿಯನ್ನು ಧರಿಸಿದ ವ್ಯಕ್ತಿಗೆ ಶಸ್ತ್ರಾಸ್ತ್ರಗಳ ಆಧಿವ್ಯಾಧಿಗಳ ಭಯ ಉಂಟಾಗುವುದಿಲ್ಲ. ಹಸಿವು ಬಾಯಾರಿಕೆಗಳಿಂದ ನರಳುವುದಿಲ್ಲ. ದೇವ, ದಾನವ, ನಾಗಾದಿಗಳಿಗೂ ಹೆದರಬೇಕಾಗಿಲ್ಲ. ರಾಕ್ಷಸರ ಸಮೂಹದಿಂದ, ಕಳ್ಳ ಕಾಕರ ಕಾಟದಿಂದ ನಿರ್ಭಯರಾಗಿರಬಹುದು.

ಇಂತಹ ವೀರ್ಯವತ್ತಾದ ಮಹಾಮಣಿಯನ್ನು ವ್ಯಾಸರ ಸಲಹೆಯ ಮೇರೆಗೆ ಅಶ್ವತ್ಥಾಮನು ಪಾಂಡವರಿಗೆ ತನ್ನ ಶಿರಸ್ಸಿನಿಂದ ತೆಗೆದುಕೊಟ್ಟು ವಾನಪ್ರಸ್ಥಾಶ್ರಮಕ್ಕೆ ಮಹಾ ಆರಣ್ಯವನ್ನು ಪ್ರವೇಶಿಸುತ್ತಾನೆ. ಆ ಶಿರೋಮಣಿಯನ್ನು ಭೀಮಸೇನನು ದ್ರೌಪದಿ ದೇವಿಗೆ ಕೊಡುತ್ತಾನೆ. ದ್ರೌಪದಿ ದೇವಿಯು ಆ ಮಣಿಯನ್ನು ಧರ್ಮರಾಯನಿಗೆ ಶಿರಸ್ಸಿನಲ್ಲಿ ಧರಿಸಲು ಕೊಡುವಳು. ಇದರಿಂದಾಗಿ ಧರ್ಮರಾಯನು ಚಂದ್ರನಿಂದ ಯುಕ್ತನಾದ ಉದಯಾಚಲದಂತೆ ರಾರಾಜಿಸಿದನು.

# ಮುಹೂರ್ತ ಗ್ರಂಥ ಮತ್ತು ವಾಸ್ತು ಪೂಜೆಯಲ್ಲಿ ಮಣಿಗಳ ಮಹತ್ವ – 12

**ರತ್ನ ಸಂಗ್ರಹ ಮತ್ತು ರತ್ನ ಭಂಡಾರ ಸ್ಥಾಪನೆಗೆ ಶುಭ ಕಾಲಗಳು**

ರಿಕ್ತತಿಥಿಗಳನ್ನು ಪೂರ್ಣಿಮಾ, ಅಮಾವಾಸ್ಯೆಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ರತ್ನ ಸಂಗ್ರಹ ಮತ್ತು ರತ್ನಗಳ ಭಂಡಾರ ಸ್ಥಾಪನೆಗೆ ಶುಭ.

ಮೃಗಶಿರ, ಆರಿದ್ರಾ, ಪುಷ್ಯ, ಉತ್ತರ, ಹಸ್ತ, ಅನುರಾಧ, ಉತ್ತರಾಷಾಢ, ಶ್ರವಣ, ಧನಿಷ್ಠ, ಶತಭಿಷ, ಉತ್ತರಾಭಾದ್ರ ಈ 11 ನಕ್ಷತ್ರಗಳಿರುವ ದಿನಗಳು ರತ್ನ ಸಂಗ್ರಹ, ರತ್ನ ಖಜಾನೆ ಸ್ಥಾಪನೆಗೆ ಸೂಕ್ತ.

ಸ್ಥಿರಕರಣಗಳು ಮತ್ತು ವಿಷ್ಟಿಕರಣಗಳು ಇರುವ ದಿವಸಗಳನ್ನು ತ್ಯಜಿಸಬೇಕು. (ಶಕುನ, ಚತುಷ್ಪಾದ, ನಾಗ, ಕಿಂಸ್ತುಘ್ನ ಇವು ಸ್ಥಿರಕರಣ).

ಸೋಮವಾರ, ಬುಧವಾರ, ಗುರುವಾರ ಮತ್ತು ಶುಕ್ರವಾರಗಳು ಚಂದ್ರ, ಬುಧ, ಗುರು ಮತ್ತು ಶುಕ್ರರ ರಾಶಿ ಮತ್ತು ಅಂಶಗಳು ರತ್ನ ಖಜಾನೆ ಸ್ಥಾಪನೆಗೆ ಉತ್ತಮವಾದ ಕಾಲ.

ಸ್ಥಿರ ರಾಶಿಗಳು ಹೆಚ್ಚು ಫಲಕಾರಿ. ದ್ವಿಸ್ವಭಾವ ರಾಶಿಗಳು ಮಧ್ಯಮ ಫಲವುಂಟುಮಾಡುತ್ತವೆ.

ಲಗ್ನಾತ್ ಉಪಚಯ ಸ್ಥಾನಗಳಲ್ಲಿ ಕ್ರೂರ ಗ್ರಹಗಳು, ಕೇಂದ್ರ, ತ್ರಿಕೋಣ ಗಳಲ್ಲಿ ಶುಭ ಗ್ರಹಗಳು ಇರುವಂತಹ ಮೂಹೂರ್ತದಲ್ಲಿ ರತ್ನ ಸಂಗ್ರಹಣೆ, ರತ್ನ ಭಂಡಾರ ಸ್ಥಾಪನೆ ಮಾಡಿದಲ್ಲಿ ಸರ್ವತೋಮುಖಿ ಅಭಿವೃದ್ಧಿ ಹೊಂದಬಹುದು. ಇಂತಹ ಮುಹೂರ್ತಕ್ಕೆ ಅಷ್ಟಮ ಸಿದ್ಧಿ ಅಂದರೆ ದುಷ್ಟ ಸ್ಥಾನವಾದ ೮ನೇ ಭಾವದಲ್ಲಿ ಯಾವ ಗ್ರಹವೂ ಇರಬಾರದು.

ಗುರುವರ್ಗೋತ್ತಮಾಂಶದಲ್ಲಿರುವುದು, ಬುಧ, ಶುಕ್ರರು ಕೇಂದ್ರದಲ್ಲಿರುವುದು ಮಹತ್ತರ ಅದೃಷ್ಟಕ್ಕೆ ಕಾರಣವಾಗುತ್ತದೆ. ಇಂತಹ ಸಮಯದಲ್ಲಿ ಮಾಡಿದ ರತ್ನ ಸಂಗ್ರಹಣೆಯಾಗಲಿ, ಸುವರ್ಣ ಸಂಗ್ರಹಣೆಯಾಗಲಿ ಲಕ್ಷಗಟ್ಟಲೆಯಾಗಿ ಪರಿವರ್ತನೆ ಆಗುವುದರಲ್ಲಿ ಸಂದೇಹವಿಲ್ಲ.

ಇದೇ ರೀತಿ ಲಗ್ನನವಾಂಶವು ಚಂದ್ರನಿಂದ ಸ್ಥಿತವಾಗಿ ಉಚ್ಛನಾಗಿದ್ದು ಅದಕೆ ಸಪ್ತಮ ಸ್ಥಾನದಲ್ಲಿರುವ ಗುರುವಿನಿಂದ ದೃಷ್ಟಿಸಲ್ಪಡುವುದು ಮಹತ್ತರ ಶುಭದಾಯಕ

ಬಹಳ ಅದೃಷ್ಟತರುವ ಲಗ್ನಾತ್ ಗ್ರಹಸ್ಥಿತಿ ಎಂದರೆ ಲಗ್ನವು ಗುರು-ಶನಿಗಳಿಂದ ಕೂಡಿದಾಗ. ಈ ಸಂದರ್ಭದಲ್ಲಿ ರತ್ನ ಸುವರ್ಣ ಹಾಗೂ ಧಾನ್ಯ ಸಂಗ್ರಹಣೆ ಭಾಗ್ಯ ವೃದ್ಧಿಗೆ ಕಾರಣವಾಗುವುದು.

ಲಗ್ನದಲ್ಲಿ ಗುರು ದ್ವಿತೀಯ ಸ್ಥಾನದಲ್ಲಿ, ಶುಕ್ರನು ದಶಮದಲ್ಲಿ, ಚಂದ್ರನು ಲಾಭ ಸ್ಥಾನದಲ್ಲಿ, ಬುಧನು ಈ ರೀತಿ ಗ್ರಹಸ್ಥಿತಿ ಇರುವ ಕಾಲದಲ್ಲಿ, ರತ್ನ, ಸುವರ್ಣ ಸಂಗ್ರಹಣೆ, ಖಜಾನೆಯ ಎಲ್ಲ ನಷ್ಟಗಳನ್ನು ತಡೆಗಟ್ಟಿ ಸ್ಥಿರತ್ವವನ್ನು ಹೊಂದುವುದು. ಸುವರ್ಣ, ರಜತ, ತಾಮ್ರ, ಹಿತ್ತಾಳೆ, ಲೋಹ, ಹವಳ, ಪಚ್ಚೆ, ಮುತ್ತು ಹಾಗೂ ವಜ್ರಗಳನ್ನು ಮೇಲೆ ಹೇಳಿದ ಶುಭ ನಕ್ಷತ್ರಗಳಲ್ಲಿ ಸಂಗ್ರಹಿಸಿದರೆ ಅಥವಾ ಅವುಗಳ ಭಂಡಾರವನ್ನು ನಿರ್ಮಿಸಿದರೆ ಸಕಲಾಭಿವೃದ್ಧಿಯಾಗುತ್ತದೆ.

ಆಧಾರ : ಮುಹೂರ್ತ ಗ್ರಂಥಗಳಲ್ಲಿ ಶ್ರೇಷ್ಠವೆನಿಸಿದ "ನರಸಿಂಹ ದೇವನ ಕಾಲ ಪ್ರಕಾಶಿಕ", ಅಧ್ಯಾಯ 21.

**ಲಕ್ಷ್ಮೀಕಂಬ ನೆಟ್ಟು ಐಶ್ವರ್ಯವಂತರಾಗಿರಿ**

ನೂತನ ಗೃಹ ನಿರ್ಮಾಣ ಕಾರ್ಯದಲ್ಲಿ ಸ್ತಂಭ ಪ್ರತಿಷ್ಠಾಪನೆ (ಅಥವಾ ಲಕ್ಷ್ಮೀ ಕಂಬವೆಂದು ನೆಡುವ ಕಂಬವು ಅಷ್ಟೈಶ್ವರ್ಯವುಂಟುಮಾಡುವುದೆಂದು ಹಿಂದೂಗಳ ಆಚಾರ ಪದ್ಧತಿಗಳಲ್ಲಿ ತಿಳಿಸಲಾಗಿದೆ. ದೇವರ ಜಗಲಿಯನ್ನು ಸ್ಥಾಪಿಸುವ ಈಶಾನ್ಯ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯೆ ಕುಬೇರ ದಿಕ್ಕನ್ನು ಗುರುತಿಸಿ ಬೇವು, ಬಿಳೀಮತ್ತಿ, ಕೆಂಪುಮತ್ತಿ, ತೇಗ ಮತ್ತು ಶ್ರೀಗಂಧದ ಮರಗಳಲ್ಲಿ ಡೊಂಕಾಗಿ ಇರದ, 19 ಅಂಗುಲ ಸುತ್ತಳತೆ, 53 ಅಥವಾ 61 ಅಂಗುಲ ಎತ್ತರ ಪ್ರತ್ಯೇಕವಾದ ಸ್ತಂಭವನ್ನು ತಯಾರು ಮಾಡಿಕೊಂಡು, ಕುಬೇರ ದಿಕ್ಕಿನಲ್ಲಿ 9 ಅಂಗುಲ ಆಳವಾದ ತಗ್ಗನ್ನು ತೆಗೆದು ಅದರಲ್ಲಿ ಪಂಚಗವ್ಯ (ಹಸುವಿನ ಹಾಲು, ಮೊಸರು, ತುಪ್ಪ, ಸಗಣಿ ಮತ್ತು ಗಂಜಲ) ವನ್ನು ಮತ್ತು ಪಂಚರತ್ನವನ್ನು (ಸುವರ್ಣ, ರಜತ, ತಾಮ್ರ, ಮುತ್ತು ಮತ್ತು ಹವಳ) ದರ್ಭೆ, ಅರಿಶಿನ ಕೊಂಬು, ಅಕ್ಷತೆ ಇವುಗಳನ್ನು ಹಾಕಿ ಪೂಜಿಸಿ ಶುದ್ಧಾಭಿಷೇಕ, ಪಂಚಾಮೃತ ಅಭಿಷೇಕ, ತೈಲಲೇಪನ, ತಳಿರು ತೋರಣಗಳ ಮತ್ತು ಹರಿದ್ರಾ ಕುಂಕುಮದಿಂದ ಪೂಜಿಸಿ, ಸುಮಂಗಲೆಯರಿಂದ ಲಕ್ಷ್ಮೀ ಕಂಬವನ್ನು ಪ್ರತಿಷ್ಠಾಪನೆ ಮಾಡುವುದು. ನಂತರ ಮುತ್ತೈದೆಯರಿಗೆ ಬಾಗಿನ ಮತ್ತು ಫಲತಾಂಬೂಲಗಳನ್ನು ಕೊಡುವುದು.

ಈ ಮೇಲಿನ ಕ್ರಮದಿಂದ ಗೃಹದ ಯಜಮಾನನ ಹಾಗೂ ಗೃಹದಲ್ಲಿ ವಾಸಿಸುವವರ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಗಳೂ ಸಿದ್ಧಿಸುತ್ತವೆಂಬ ನಂಬಿಕೆ ಈಗಲೂ ಇದೆ.

ಮೇಲಿನ ವಿವರಣೆಯಿಂದ ಲಕ್ಷ್ಮೀಕಂಬ ಸ್ಥಾಪನೆಯಲ್ಲಿ ಹವಳ, ಮುತ್ತುಗಳ ಪ್ರಾಧಾನ್ಯತೆಯನ್ನು ಕಾಣಬಹುದಲ್ಲವೇ ?

ಆಧಾರ : "ವಾಸ್ತುವಿದ್ಯಾ" ಗ್ರಂಥಗಳಲ್ಲಿ ಹೇಳಿರುವ ವಾಸ್ತು ಪೂಜಾ ವಿಭಾಗ.

## ಆಯುರ್ವೇದ ಗ್ರಂಥಗಳಲ್ಲಿ ನವರತ್ನಗಳಿಂದ ಔಷಧಿ – 13

**ಪ್ರಯೋಗ :**

1. **ಮಾಣಿಕ್ಯ** (ಪದ್ಮರಾಗ) Ruby

ಆ ರಕ್ತವರ್ಣವುಳ್ಳ ಮಾಣಿಕ್ಯವು ಮೃದು, ಸಿದ್ಧವು, ಮಧುರವು, ವಾತಪಿತ್ತ ನಾಶಕವು, ಅಗ್ನಿದೀಪಕವು, ಕಫ, ವಾತ ಹಾಗೂ ಕ್ಷಯನಾಶಕ ಗುಣವುಳ್ಳದ್ದೂ ಆಗಿದೆ.

## 2. ಮುತ್ತು (ಮೌಕ್ತಿಕ) Pearl

ನಾನಾ ವರ್ಣವುಳ್ಳದ್ದು ಮತ್ತು ಹೊಳಪುಳ್ಳದ್ದು ಆಗಿದೆ. ಇದನ್ನು ಶುದ್ಧಿ ಮಾಡಿ ಔಷಧಿಗಾಗಿ ಉಪಯೋಗಿಸುವರು. ಲಘು ಗುಣವುಳ್ಳದ್ದು, ತ್ರಿದೋಷಘ್ನವೂ, ಲಘುರೂಪ ಗುಣದಿಂದ ಕಫವನ್ನೂ, ಮಧುರ ರಸದಿಂದ ವಾತವನ್ನೂ, ಶೀತವೀರ್ಯ ಗುಣದಿಂದ ಪಿತ್ತವನ್ನು ಶಾಂತಗೊಳಿಸುತ್ತದೆ. ದೀಪನ, ಯಕೃತ್‌ಬಲ್ಯ ಹಾಗೂ ಗ್ರಾಹಿಯಾಗಿದೆ. ಹೃದ್ಯ ಹಾಗೂ ಶೋಣಿತ ಸ್ಥಾಪಕವಾಗಿದ್ದು, ಶೋಕಹರವಾಗಿದೆ. ಕಫಸಾರಕ, ವೃಷ್ಯ, ಮೂತ್ರಲ, ಸ್ವೇದಾಪನಯನ, ಜ್ವರಘ್ನ ದಾಹಪ್ರಶಮನ, ಚಕ್ಷುಷ್ಯವಾಗಿದೆ. ಮುತ್ತು ದಾಹಶಾಮಕ, ಅಸ್ಥಿಗಳಿಗೆ ಬಲವನ್ನು ಕೊಡುವುದು. ಉಷ್ಣವನ್ನು ಶಮನಮಾಡುವುದು. ಮೇಹಾಸ್ರ, ರಕ್ತಪಿತ್ತಶ್ವಾಸಾದಿ ರೋಗಗಳನ್ನು, ವಾಂತಿ ಆಂತ್ರಶೂಲಗಳನ್ನು, ಭ್ರಾಂತಿ, ತಲೆ ತಿರುಗುವಿಕೆ ಮತ್ತು ಬಳಲಿಕೆಗಳನ್ನು ಪರಿಹರಿಸುತ್ತದೆ.

ತೆಗೆದುಕೊಳ್ಳಬೇಕಾದ ಪ್ರಮಾಣ : 1 ರಿಂದ 2 ಗುಂಜಿ.

ಅನುಪಾನ : ಹಾಲು, ತುಪ್ಪ, ಸಕ್ಕರೆ, ಜೇನು, ಬೆಣ್ಣೆ, ಬ್ರಾಹ್ಮೀ ಅವಲೇಹ್ಯ, ಡಾಮಿ ಮಾವಲೇಹ್ಯ, ಕೂಷ್ಮಾಂಡಾವ ಲೇಹ್ಯ.

ವಿಶಿಷ್ಟಯೋಗ : ಮುಕ್ತಾಪಂಚಾಮೃತ, ಮೌಕ್ತಿಕಾಚೂರ್ಣ, ವಸಂತಕುಸುಮಾಕರ.

## 3. ಹವಳ (ಪ್ರವಾಳ) Coral

ಸಮುದ್ರದಲ್ಲಿ ಸಿಗುವ ಉತ್ತಮ ಹವಳಗಳು ರಕ್ತವರ್ಣದ್ದು ಶೀತವೀರ್ಯ ವುಳ್ಳದ್ದು, ತ್ರಿದೋಷಹರವಾಗಿದೆ, ಕಫವಾತಘ್ನವಾಗಿದೆ. ಆಮ್ಲನಾಶಕ, ದೀಪನ ಪಾಚನ, ಹೃದ್ಯ, ಶೋಣಿತ ಸ್ಥಾಪಕವಾಗಿದೆ. ವೃಷ್ಯ, ಮೂತ್ರಲಾ, ಜ್ವರಘ್ನ, ಬಲ್ಯ ಹಾಗೂ ವಿಷಘ್ನವಾಗಿದೆ.

ಪ್ರವಾಳ ಭಸ್ಮವು ಕಾಸ, ಕಫ, ವಾಯು, ಪಾಂಡುರೋಗ, ಜ್ವರ, ಮೂತ್ರ ಸಂಬಂಧವಾದ ಎಲ್ಲ ರೋಗಗಳಲ್ಲಿ ಅತ್ಯುತ್ತಮ ಗುಣಕೊಡುವುದು. ಬಾಯಾರಿಕೆ, ವಾಂತಿ, ತಲೆ ತಿರುಗುವುದು, ನಿದ್ರಾನಾಶ, ತಲೆನೋವು. ಉಷ್ಣವಿಕಾರಗಳಲ್ಲಿ ಒಳ್ಳೆಯ ಗುಣ ಕೊಡುವುದು. ಗರ್ಭಿಣಿಯರ ವಾಂತಿಯನ್ನು ನಿಲ್ಲಿಸಲು ಅತ್ಯುಪಯುಕ್ತ. ಸ್ವಪ್ನಾವಸ್ಥೆ, ಕಾಮಸಂಬಂಧಿತ ರೋಗಗಳಲ್ಲಿ ಒಳ್ಳೆಯದು. ಗರ್ಭಪಾತವಾಗುವುದನ್ನು ತಡೆಗಟ್ಟುವುದು.

ಪ್ರಮಾಣ : 2 ರಿಂದ 8 ಗುಂಜಿ.

ಅನುಪಾನ : ಹಾಲು, ಸಕ್ಕರೆ, ತುಪ್ಪ, ಕೂಷ್ಮಾಂಡಲೇಹ್ಯ, ಬೆಣ್ಣೆ, ಸಕ್ಕರೆ.

ವಿಶಿಷ್ಟಯೋಗ : ಪ್ರವಾಳ ಭಸ್ಮ, ಪ್ರವಾಳ ಪಂಚಾಮೃತ.

### 4. ಪಚ್ಚೆ Emerald

ಹಸಿರು ವರ್ಣದ ಜಡವಾದ ಸ್ನಿಗ್ಧಗುಣವುಳ್ಳ, ಪ್ರಕಾಶಮಾನವಾದ ಪಚ್ಚೆ ಶ್ರೇಷ್ಠತೆರದ್ದು. ಇದರಿಂದ ಜ್ವರ, ಓಕರಿಕೆ, ವಿಷ, ಸನ್ನಿಪಾತ, ಮೂಲವ್ಯಾಧಿ, ಅಗ್ನಿಮಾಂದ್ಯ, ಪಾಂಡುರೋಗ, ಬಾವು ಮೊದಲಾದ ವಿಕಾರಗಳು ದೂರವಾಗಿ ಓಜಸ್ಸು ವೃದ್ಧಿಯಾಗುತ್ತದೆ.

### 5. ಪುಷ್ಪರಾಗ Topaz

ಇದು ಹಳದಿ ಅಥವಾ ಬಿಳಿ ಹಳದಿ ಮಿಶ್ರಿತವರ್ಣದ್ದು. ಇದು ಮೃದು, ಸ್ನಿಗ್ಧ, ಶೀತವೀರ್ಯ ಗುಣವುಳ್ಳದ್ದು. ಕಫ, ವಾತನಾಶಕ ದೀಪನ, ಪಾಚನ, ಅನುಲೋಮನ, ಕುಷ್ಠಘ್ನ, ವಿಷಘ್ನ ದಾಹಪ್ರಶಮನವಾಗಿದೆ. ಇದರಿಂದ ಕುಷ್ಟ, ವಿಷ ಹಾಗೂ ಮಸ್ತಿಷ್ಕ ದೌರ್ಬಲ್ಯಗಳು ದೂರವಾಗುವುದು. ಮೂಲವ್ಯಾಧಿಗೆ ಉತ್ತಮ ಪ್ರಯೋಗ.

ಪ್ರಮಾಣ : 1/4 ರಿಂದ 1 ರತ್ತಿ.

### 6. ವಜ್ರ Diamond

ಶುದ್ಧಮಾಡಿದ ವಜ್ರವು ಆಯುವೃದ್ಧಿಮಾಡುತ್ತದೆ. ಇದು ತನ್ನ ತ್ವರಿತ ಗುಣದಿಂದ ತೀವ್ರಕಾಮೋದ್ದೀಪನಮಾಡುವುದು. ಸರ್ವರೋಗಹರ. ಅಗ್ನಿದೀಪನ ಮತ್ತು ಅಮೃತ ತತ್ವವುಳ್ಳ ಬಲ್ಯ ವಸ್ತುವಾಗಿದೆ. ಶುದ್ಧಮಾಡದ ವಜ್ರವನ್ನು ಉಪಯೋಗಿಸಿದಲ್ಲಿ ಮಾರಕವಾಗಬಲ್ಲದು.

ಪ್ರಮಾಣ : 1/32 ರಿಂದ 1/10 ರತ್ತಿ.

ವಿಶಿಷ್ಟಯೋಗ : ಕಂದರ್ಪಕೋಗಿಲ, ಹೀರಕ ರಸಾಯನ.

### 7. ಇಂದ್ರನೀಲ Blue-Sapphire

ನೀಲವರ್ಣವುಳ್ಳ ಈ ಮಣಿ ಸ್ನಿಗ್ಧ, ಗುರು ಲಕ್ಷಣಗುಣವುಳ್ಳದ್ದು. ತ್ರಿದೋಷಘ್ನವೂ, ದೀಪನ, ಬಲ್ಯವೂ ಆಗಿದೆ. ಇದರಿಂದ ಮಸ್ತಿಷ್ಕ ದೌರ್ಬಲ್ಯ, ಕ್ಷಯ, ಶ್ವಾಸ, ಕಾಸ, ಹೃದ್ರೋಗ, ಅರ್ಶಸ್ಸು ಕುಷ್ಠರೋಗಗಳಲ್ಲಿ ಉತ್ತಮ ಗುಣ ಕೊಡುವುದು.

### 8. ಗೋಮೇಧಿಕಾ Hessonite

ಗೋಮೂತ್ರ ವರ್ಣವುಳ್ಳ ಈ ರತ್ನ ಸ್ನಿಗ್ಧ, ಗುರುಶ್ಲಕ್ಷ್ಣವಾಗಿದೆ. ಇದು ಕಫ, ಪಿತ್ತನಾಶಕ, ದೀಪನ, ಪಾಚನ, ತ್ವಕ್ ದೋಷಹರ ಮತ್ತು ಬಲ್ಯ. ಅಗ್ನಿ

ಮಾಂದ್ಯ, ಮಸ್ತಿಷ್ಕ ದೌರ್ಬಲ್ಯ, ಚರ್ಮರೋಗ, ಪಾಂಡು ಮತ್ತು ಕ್ಷಯರೋಗಗಳಲ್ಲಿ ಉಪಯುಕ್ತವಾಗಿ ಕಂಡುಬಂದಿದೆ.

ಪ್ರಮಾಣ : 1/4 ರಿಂದ 1 ರತ್ತಿ.

**9. ವೈಡೂರ್ಯ** Cat's Eye

ಬೆಕ್ಕಿನ ಕಣ್ಣಿನಂತೆ ಮಿಶ್ರ ವರ್ಣವುಳ್ಳ ಜಡವಾದ ಪದರಗಳುಳ್ಳ ವೈಢೂರ್ಯವು ಮಧುರ, ಸ್ನಿಗ್ಧ, ಶೀತವೀರ್ಯ, ದೀಪನ ಅನುಲೋಮನ, ಬಲ್ಯ ಮೇಧ್ಯ ಪಿತ್ತಶಾಮಕ ವಾದದ್ದು. ನೇತ್ರರೋಗ, ರಕ್ತಪಿತ್ತ, ಕ್ಷಯ, ಮಸ್ತಿಷ್ಕ, ದೌರ್ಬಲ್ಯತೆ ಹೋಗಲಾಡಿಸುವುದು.

ಪ್ರಮಾಣ : 1/8 ರಿಂದ 1 ರತ್ತಿ.

**ರತ್ನಗಳಿಂದ ರೋಗ ನಿವಾರಣೆ**—ಅನ್ಯಮತ :

ರಸವಾದ ಗ್ರಂಥಗಳೂ, ಆಯುರ್ವೇದ ಗ್ರಂಥಗಳೂ, ರತ್ನಗಳಿಂದ ರೋಗ ನಿವಾರಣೆ ಹಾಗೂ ತಡೆಯುವ ಸಾಧ್ಯತೆಯನ್ನು ಈ ರೀತಿ ವಿವರಿಸಿವೆ—

1. **ಮಾಣಿಕ್ಯ** : ಭೀತಿ, ಭೂತಬಾಧೆ, ಹೃದ್ರೋಗ, ಚರ್ಮರೋಗ ಮತ್ತು ಒಳಜ್ವರಗಳ ತಡೆಗೆ.
2. **ಮುತ್ತು** : ಉನ್ಮಾದ, ಮಾನಸಿಕರೋಗ, ಗರ್ಭದೋಷ, ಶ್ವಾಸದೋಷ ತಡೆಯಲು.
3. **ಪಚ್ಚೆ** ಮೆದುಳಿನ ರೋಗ, ನರಗಳ ನಿಶ್ಶಕ್ತಿ, ಸನ್ನಿಪಾತಜ್ವರ, ಮೂರ್ಛೆ, ಪಾರ್ಶ್ವವಾಯುವಿನ ನಿವಾರಣೆ.
4. **ಪುಷ್ಪರಾಗ** : ವಾಂತಿ, ವಾಕರಿಕೆ, ಪಿತ್ತವಿಕಾರ, ಕರುಳಿನದೋಷ, ಕಿವಿಯ ರೋಗ ಮತ್ತು ಬಿಕ್ಕಳಿಕೆಗೆ.
5. **ವಜ್ರ** : ವೀರ್ಯವೃದ್ಧಿ, ಗುಪ್ತರೋಗಗಳ ತಡೆ, ಮುಪ್ಪನ್ನು ದೂರ ಮಾಡುವ ಅಮೃತ ಶಕ್ತಿ ಪಡೆದಿದೆ.
6. **ನೀಲ** : ಕಜ್ಜಿ, ಇಸಬು, ಗಜಕರ್ಣ, ಪಾರ್ಶ್ವವಾಯು, ಕ್ಷಯ, ಗೂರಲು ರೋಗ ನಿವಾರಣೆ.
7. **ಗೋಮೇಧಿಕಾ** : ಅಂಗಾಂಗಗಳ ನೋವು ಮತ್ತು ಕುಷ್ಠರೋಗಕ್ಕೆ.
8. **ವೈಢೂರ್ಯ** : ಹೊಟ್ಟೆಯುಬ್ಬರ, ನೇತ್ರರೋಗ ಮತ್ತು ರಕ್ತಪಿತ್ತ ವಿಕಾರಗಳಿಗೆ.

9. **ಪ್ರವಾಳ** (ಹವಳ) : ವೀರ್ಯಸ್ಖಲನ, ಮೊಳೆರೋಗ, ಅಂಡಾಶಯ ವೃದ್ಧಿ. ಜಠರವ್ರಣ, ಮೆದುಳಿನ ಜ್ವರ ಮತ್ತು ಶಿರೋರೋಗಗಳಿಗೆ.

ನವರತ್ನ ಭಸ್ಮ, ನವರತ್ನ ಕಲ್ಪ ಸರ್ವರೋಗ ನಿವಾರಣೆಗೆಂದು ತಿಳಿಸಿರುವರು.

**ಅನ್ಯ ಗ್ರಂಥಗಳಲ್ಲಿ ರತ್ನಗಳ ಪ್ರಯೋಗ**

**ರತ್ನವ ಧರಿಸಿ-"ಗ್ರಹಬಾಧೆಯು" ನಿವಾರಿಸಿಕೊಳ್ಳಿ !**

ಗ್ರಹಬಾಧೆಯು ನಿವಾರಣೆಗೆ, ಹರ್ಷಚಿತ್ತರಾಗಿರುವುದಕ್ಕೆ, ರತ್ನಗಳನ್ನು, ಸುಗಂಧ ಪುಷ್ಪಹಾರಗಳನ್ನು ಧರಿಸಲು "ಸುಶ್ರುತ ಸಂಹಿತೆ"ಯ ಈ ಶ್ಲೋಕದಲ್ಲಿ ಹೇಳಲಾಗಿದೆ.

**ಶ್ಲೋಕ** ॥ ರಕ್ಷೋಘ್ನ ಮಥಚಾಜ್ಯಸ್ಯಂ ಸೌಭಾಗ್ಯಕರ ಮುತ್ತಮಂ ।
ಸುಮನೋಂಬರ ರತ್ನಾನಾಂ ಧಾರಣಂ ಪ್ರೀತಿವರ್ಧನಂ ॥

(ಸುಶ್ರುತಾ ಚಿಕಿತ್ಸಾ, ಅ. 24. ಶ್ಲೋ. 64)

**ಅರ್ಥ** : ಸುಗಂಧ ಪುಷ್ಪಮಾಲೆ, ಶುಭ್ರ ವಸ್ತ್ರ ಮತ್ತು ರತ್ನಗಳನ್ನು ಧರಿಸುವುದರಿಂದ ಗ್ರಹರಾಕ್ಷಸಬಾಧಾ ನಿವಾರಣೆಯೂ, ಶರೀರದಲ್ಲಿ ಕಾಂತಿಯೂ ಉತ್ಸಾಹದಾಯಕವೂ. ಮಂಗಳಕರವೂ, ಸೌಂದರ್ಯವೃದ್ಧಿಯೂ, ಪ್ರೀತಿ ಸೌಹಾರ್ದ ವೃದ್ಧಿಯೂ ಉಂಟಾಗುತ್ತದೆ.

ಪವಿತ್ರ ಪ್ರಭಾವವುಳ್ಳ ರತ್ನಗಳನ್ನು ಧರಿಸುವುದು ಶ್ರೇಷ್ಠ, ದೋಷಹರ, ಮಹತ್ವಪೂರ್ಣವುಳ್ಳದ್ದು. ಶರೀರಕ್ಕೆ ಸಂಭವಿಸಬಹುದಾದ ವಿಷಜಂತು ಭೌತಿಕ ಬಾಧೆಯ ನಿವಾರಣೆಗಾಗಿಯೂ, ಗ್ರಹ, ಭೂತದೃಷ್ಟಿ, ದೋಷಾದಿಗಳ ನಿವಾರಣೆಗಾಗಿಯೂ ಅಲೌಕಿಕ ಪ್ರಭಾವೀ ರತ್ನಗಳನ್ನು ಧರಿಸಿ.

**ರತ್ನಗಳ ಪ್ರಾಯೋಗಿಕ ವೈಶಿಷ್ಟ್ಯ**

(ಅನೇಕ ಗ್ರಂಥಗಳ ಆಧಾರ)

1. ವಜ್ರವನ್ನು ಧರಿಸಿದವರಿಗೆ ವಿಷವೇರದು.
2. ವಜ್ರವನ್ನು ಧರಿಸಿದವರಿಗೆ ದುಸ್ವಪ್ನ ಬೀಳದು.
3. ಮಾಣಿಕ್ಯ ಧರಿಸಿದವರಿಗೆ (ಸ್ತ್ರೀಯರು ಇದನ್ನು ಧರಿಸುವುದು ಉಚಿತವಲ್ಲವೆಂದು ಮೊದಲೇ ತಿಳಿಸಿದ್ದೇವೆ) ಮನೋವೈಕಲ್ಪ ಹೋಗಿ "ಉಲ್ಲಾಸ – ಹರ್ಷ" ಉಂಟಾಗುತ್ತದೆ.

4. ನೀಲ (ಇಂದ್ರನೀಲ) ರತ್ನ ಧರಿಸಿದರೆ ನಾಸಿಕ ಬಾಧೆಗಳೂ, ನಾಸಿಕದಲ್ಲಿ ಉಂಟಾಗುವ ರಕ್ತಸ್ರಾವವೂ ನಿಲ್ಲುತ್ತದೆ.

5. ನೀಲಮಣಿಯನ್ನು ನೇತ್ರಗಳ ಮೇಲೆ ಇಟ್ಟುಕೊಂಡರೆ ಕಣ್ಣಿನ ಪರೆ ಆಗಿರುವುದು ಹೋಗಿ ದೃಷ್ಟಿ ಸ್ಪಷ್ಟವಾಗುವುದು.

6. ನಾಲಿಗೆಯ ಮೇಲೆ ನೀಲಮಣಿ ಇಟ್ಟುಕೊಂಡಲ್ಲಿ ದಾಹ ಮತ್ತು ದಣಿವು ದೂರವಾಗುತ್ತೆ.

7. ಪಚ್ಚೆಯನ್ನು ಗರ್ಭಿಣಿ ಸ್ತ್ರೀಯ ಪ್ರಸವ ವೇದನೆಯುಂಟಾದಾಗ ಜಂಘೆಯ ಮೇಲೆ ಇಟ್ಟರೆ ಹೆರಿಗೆಯು ಸುಖಮಯವಾಗುವುದು.

8. ರತ್ನ ಧರಿಸಿದಲ್ಲಿ ಮನಸ್ಸಿಗೆ ಆನಂದ ತರುವುದು.

9. ಪುಷ್ಪರಾಗ ಧರಿಸಿದಲ್ಲಿ ದೂರಾಲೋಚನೆ ಮತ್ತು ದೈವಿಕ ಭಾವನೆಗಳಿಗೆ ಪ್ರೇರಕವಾಗಿದೆ.

10. ಕಾಮಾಲೆ ರೋಗವನ್ನು ನಿವಾರಿಸಿಕೊಳ್ಳಲು ಪದ್ಮರಾಗ ಧರಿಸುವುದು ಸೂಕ್ತ.

11. ಉಬ್ಬಸ, ಗಸೆ ಇರುವವರು ಸೂರ್ಯಕಾಂತಮಣಿಯನ್ನು ಬೆಳ್ಳಿಯ ಉಂಗುರದಲ್ಲಿ ಧರಿಸಿದರೆ ಪರಿಹಾರ ಸಿಗುತ್ತೆ.

12. ದೃಷ್ಟಿದೋಷಗಳಿದ್ದರೆ ವೈಡೂರ್ಯಧಾರಣೆ ಸೂಕ್ತ.

13. ಚಂದ್ರಕಾಂತ ಮಣಿಯನ್ನು ಧರಿಸಿದರೆ ಭೂತ, ಪ್ರೇತ, ಪಿಶಾಚಿಗಳ ಬಾಧೆಯಿಂದ ನಿವೃತ್ತಿ.

14. ಫಿರೋಜಾರತ್ನ ಭಯ-ಭೀತಿ ನಿವಾರಕ.

15. ಸುರಮಾರತ್ನ ಸುಖ-ಸಂತಸ ಉಂಟುಮಾಡುತ್ತೆ.

16. ಸುರಮಾಕಲ್ಲಿನ ಉಂಗುರ ಧರಿಸಿದರೆ ದುಸ್ವಪ್ನಗಳು ದೂರವಾಗುತ್ತೆ.

17. ಗೋಮೇಧಿಕಾ ರತ್ನಧಾರಣೆ ಕಾಮಪ್ರಚೋದಕ.

18. ಗೋಮೇಧಿಕಾ ರತ್ನವನ್ನು ಸ್ನಾನಮಾಡುವ ನೀರಿನಲ್ಲಿ ಹಾಕಿ, ನಂತರ ಸ್ನಾನಮಾಡಿದರೆ ಮೇಹರೋಗ ಬಾಧೆಯಿಂದ ನಿವೃತ್ತಿ.

# ಸಪ್ತಧಾತು-ಸಪ್ತವರ್ಣಮಯ ಶರೀರ ಮತ್ತು ರತ್ನಗಳು–14

ಮಾನವನ ಶರೀರ ರಚನೆ ಇಂದಿಗೂ ಪೂರ್ಣ ಅರ್ಥವಾಗದ ಜಟಿಲ ರಹಸ್ಯ. ಪಂಚಭೂತಾತ್ಮಕವಾದ ಈ ಶರೀರದಲ್ಲಿ ಸಪ್ತಧಾತುಗಳ, ತ್ರಿದೋಷಗಳ ಮಲತ್ರಯಗಳ ನಿವಾಸ ಸ್ಥಾನವಾಗಿದೆ. ವಿದ್ಯುತ್ವಾಹಕವೂ, ಪರಮಾಣುಗಳಿಂದ ನಿಬಿಡವೂ ಆಗಿದೆ. ಷಟ್ಚಕ್ರಗಳ ಸೂಕ್ಷ್ಮಾಸೂಕ್ಷ್ಮ ಕ್ರಿಯೆಗಳ ಸತ್ವರಜೋತಮೋ ಗುಣಗಳ ಆಂತರಿಕ ಹಾಗೂ ಬಾಹ್ಯ ಪ್ರಭಾವಿಕ ವರ್ಣಗಳ ತಾಣ್ಯವಾಗಿದೆ. ಬುದ್ಧಿ ಮನಸ್ಸುಗಳ ಪ್ರೇರಕ ಸ್ಥಾನವಾಗಿದೆ. ಬಾಹ್ಯ ಪ್ರಪಂಚದ ಕ್ರಿಯೆಗೂ ಸಂಬಂಧವಿದೆ ಎಂಬುದರಲ್ಲಿ ಸಂದೇಹವಿಲ್ಲ. ಇವುಗಳನ್ನು ವ್ಯಕ್ತಪಡಿಸಿರುವವು ನಮ್ಮ ಆಯುರ್ವೇದ, ಯೋಗ ಶಾಸ್ತ್ರ, ಆಧ್ಯಾತ್ಮಿಕ ಗ್ರಂಥಗಳು. ಇವುಗಳ ಹಿನ್ನೆಲೆಯಲ್ಲಿ ಚೇತನಾರೂಪಕವಾಗಿ ಗ್ರಹಗಳ ಕೈವಾಡವಿದೆ ಎಂಬುದು ಜ್ಯೋತಿಷಿಗಳ ವಾದ. ಬಾಹ್ಯದಲ್ಲಿರುವ ವಸ್ತುಗಳ ಮೇಲೂ, ಆಂತರಿಕ ವ್ಯಕ್ತಿತ್ವದ ಮೇಲೂ, ಸ್ಥೂಲ ಸೂಕ್ಷ್ಮ ಶರೀರದ ಮೇಲೂ ಗ್ರಹಗಳ ಸ್ಪಂದನ ಪ್ರಭಾವವಿದೆಯೆಂದು ಇವರ ತರ್ಕ. ವ್ಯಕ್ತಿ ಹಾಗೂ ವಸ್ತುಗಳ ಮೇಲೆ ಇವುಗಳು ಬೀರುವ ಪ್ರಭಾವ ವೈಶಿಷ್ಟ್ಯ ಪ್ರಮುಖವಾದುದು ಎಂಬುದರಲ್ಲಿ ಸಂಶಯವಿಲ್ಲ. ಕಾಲ ದೇಶ ಮಾನಗಳಿಗೆ ವ್ಯಕ್ತಿ-ವಸ್ತುವಿಗೆ ತಕ್ಕಂತೆ ತಮ್ಮ ಪ್ರಭಾವ ಬೀರುತ್ತವೆ. ಈ ತತ್ವವೇ ಜ್ಯೋತಿಷಿಗಳ ಪ್ರಕಾರ ಮಾನವನ ಮೇಲೆ ನವರತ್ನಗಳ ಪ್ರಭಾಕಿರಣಗಳು ವ್ಯಕ್ತಾವ್ಯಕ್ತವಾಗಿ ಫಲವುಂಟುಮಾಡಲು ಸಾಧ್ಯ ಎಂಬುದಕ್ಕೆ ಕಾರಣ. ಇದನ್ನು ಆಯುರ್ವೇದ ಶಾಸ್ತ್ರೀಯ ಗ್ರಂಥಗಳಿಂದಲೂ, ಯೋಗಶಾಸ್ತ್ರಕ್ಕೆ ಸಂಬಂಧಿಕ ಗ್ರಂಥಗಳಿಂದಲೂ ಶ್ರುತಪಡಿಸಬಹುದು. ನಮ್ಮ ಶರೀರ ರಚನೆಯ ಕೆಲವು ಗೋಪ್ಯ ವಿಚಾರಗಳನ್ನು ಇಲ್ಲಿ ತಿಳಿಸಲಾಗಿದೆ.

ರಸಾದಿ ಸಪ್ತಧಾತುಗಳು ಆಹಾರದಿಂದ ಅಭಿವೃದ್ಧಿಯಾಗುತ್ತವೆ. ರಸದಿಂದ ರಕ್ತ, ರಕ್ತದಿಂದ ಮಾಂಸ, ಮಾಂಸದಿಂದ ಮೇದಸ್ಸು, ಮೇದಸ್ಸಿನಿಂದ ಅಸ್ಥಿ, ಅಸ್ಥಿಯಿಂದ ಮಜ್ಜೆ, ಮಜ್ಜೆಯಿಂದ ಶುಕ್ರಧಾತುವುಂಟಾಗುವುದು. ಶರೀರದಲ್ಲಿ ಕೆಲವು ಪದಾರ್ಥಗಳು ಕೆಲವೊಂದು ಉತ್ಪತ್ತಿಗೂ, ಕೆಲವು ನಾಶಕ್ಕೂ ಕಾರಣವಾಗಿವೆ. ಸಪ್ತಧಾತುಗಳೇ ಆಕಾರಕ್ಕೆ ಕಾರಣ.

ಪೃಥ್ವಿಯಾದಿ ಪಂಚಭೂತಗಳ ಭಾವಗಳು ಕ್ರಮವಾಗಿ ಸ್ಥೂಲತ್ವ, ದ್ರವತ್ವ, ಉಷ್ಣತ್ವ, ಸೂಕ್ಷ್ಮತ್ವ, ವಿರಲತ್ವ ಮತ್ತು ಸುಶಿರತ್ವವೆಂದು ಕರೆಯಲ್ಪಡುತ್ತವೆ. ಶರೀರದಲ್ಲಿ ಕಾಣುವ ಭಾಗ ಪೃಥ್ವಿವ್ಯಂಶದಿಂದ ಉಂಟಾದದ್ದು. ಭೂಮಿಯಲ್ಲಿ ಆಕರ್ಷಕ ಶಕ್ತಿ ಇದೆ. ಆದರಿಂದ ಆಕರ್ಷಿಸಲ್ಪಡುವ ಕಾರಣ ಇತರ ದ್ರವ್ಯಗಳಿಗಿಂತ ಪಾರ್ಥಿವ ದ್ರವ್ಯದಲ್ಲಿ ಭೂತವಿಕಾರಾಂಶಗಳು ಹೆಚ್ಚಿವೆ. ಪರಮಾಣುಗಳು ಹೆಚ್ಚಾಗಿರುವುದರಿಂದ ಸ್ಥೂಲತ್ವವುಂಟಾಗುತ್ತದೆ.

ಪಾರ್ಥಿವ ದ್ರವ್ಯದಲ್ಲಿ ಉಳಿದವುಗಳಿಗಿಂತ ಜಲಾಂಶವು ಅಧಿಕವಾದಾಗ ದ್ರವವೂ, ತೇಜಸ್ಸು ಅಧಿಕವಾದಾಗ ಉಷ್ಣವೂ-ಲಘುವೂ, ವಾಯುವು ಅಧಿಕವಾದಾಗ

ಸೂಕ್ಷ್ಮವೂ, ಲಘುವೂ, ಆಕಾಶಾಂಶವು ಅಧಿಕವಾದಾಗ ಸುಶಿರತ್ವವೂ, ವಿರಲತ್ವವೂ ಉಂಟಾಗುತ್ತದೆ.

ರಸವು 3015 ಕಲೆಯ ಕಾಲ ಒಂದು ಧಾತುವಿನಲ್ಲಿ ಇರುತ್ತದೆ. ಹೀಗೆ ಒಂದು ತಿಂಗಳಲ್ಲಿ ರಸವು ಪುರುಷರಲ್ಲಿ ಶುಕ್ರವಾಗಿಯೂ, ಸ್ತ್ರೀಯರಲ್ಲಿ ಆರ್ತವ ವಾಗಿಯೂ ಪರಿಣಮಿಸುತ್ತದೆ. ಆಹಾರ ರಸದಿಂದ 1 ದಿವಸದಲ್ಲಿ ರಸಧಾತುವುಂಟಾಗಿ, 2 ದಿವಸದಲ್ಲಿ ರಸದಿಂದ ರಕ್ತ, 3 ದಿವಸದಲ್ಲಿ ಮಾಂಸ, 4 ದಿವಸದಲ್ಲಿ ಮೇದಸ್ಸು, 5 ದಿವಸದಲ್ಲಿ ಶುಕ್ರಧಾತುವು ಉಂಟಾಗುತ್ತದೆ. ಹೀಗೆ 28 ದಿವಸಗಳಲ್ಲಿ ರಸದಿಂದ ಶುಕ್ರಪರ್ಯಂತ ಧಾತುಗಳು ಕ್ರಮವಾಗಿ ಉಂಟಾಗುತ್ತವೆ.

ಪರಮಾಣು ಸಂಯೋಗ ಮತ್ತು ವಿಯೋಗ ಶರೀರದ ಪದಾರ್ಥಗಳ ಉತ್ಪತ್ತಿ ವೃದ್ಧಿ ಇತ್ಯಾದಿ ಸಮಸ್ತ ಕೆಲಸಗಳಿಗೆ ಪ್ರಧಾನ ಕಾರಣ.

ಅಷ್ಟಾಂಗ ಹೃದಯದಲ್ಲಿ ಶುಕ್ರಾಂತವಾದ ಧಾತುಗಳ ತೇಜಸ್ಸೇ ಓಜಸ್ಸು. ಇದರ ನಾಶದಿಂದ ಶರೀರದ ನಾಶ ಎಂದು ಚರಕ ಸಂಹಿತೆಯಲ್ಲಿ, ಹೃದಯದಲ್ಲಿ ಶುದ್ಧ ವಾಗಿಯೂ, ಸ್ವಲ್ಪ ಹಳದಿಯಾಗಿಯೂ ರಕ್ತದಂತಿರುವ ಯಾವ ದ್ರವ್ಯವಿದೆಯೋ ಅದನ್ನೇ ಓಜಸ್ಸೆಂದು ಸುಶ್ರುತ ಸಂಹಿತೆಯಲ್ಲಿ ರಸಾದಿ ಶುಕ್ರಾಂತವಾದ ಧಾತುಗಳ ಶ್ರೇಷ್ಠವಾದ ಯಾವ ತೇಜಸ್ಸಿದೆಯೋ ಅದಕ್ಕೆ ಓಜಸ್ಸೆಂದು ಬಲವೆಂದು ಹೆಸರು.

ವಿವಿಧ ಅವಯವಗಳಿಂದ ವಿಶಿಷ್ಟ ಆಕೃತಿಗಳಿಂದ ಕೂಡಿರುವುದು ಶರೀರ. ವಾತಾದಿದೋಷಗಳು ವಿಕೃತವಾದ ಆಮದ್ರವ್ಯದೊಡನೆ ಕೂಡಿ ಶರೀರಾವಯವಗಳಲ್ಲಿ ಸಂಚರಿಸಿ ಅನೇಕ ವ್ಯಾಧಿಗಳನ್ನುಂಟುಮಾಡುತ್ತದೆ.

1. ವಾತದಿಂದ 80 ರೋಗಗಳು ಉಂಟಾಗುವವು.
2. ಪಿತ್ತದಿಂದ 40 ರೋಗಗಳು ಉಂಟಾಗುವವು.
3. ಕಫದಿಂದ 20 ರೋಗಗಳು ಉಂಟಾಗುವವು.

### ವಾತಪ್ರಕೋಪದಿಂದ ಉಂಟಾಗುವ 80 ರೋಗಗಳು

1. ಉಗುರು ಬಿರಿಯುವುದು
2. ಪಾದದ ಅಡಿಯಲ್ಲಿ ನೋವು
3. ಅಪೇಕ್ಷಿತ ಸ್ಥಳದಲ್ಲಿ ಕಾಲುಗಳನ್ನು ಇಡಲು ಅಸಾಧ್ಯವಾದುದು
4. ಕೈಕಾಲುಗಳು ಒಡೆಯುವುದು
5. ಮೊಣಕಾಲಿನ ಮಾಂಸಖಂಡದಲ್ಲಿ ನೋವು
6. ಅಂಗಾಲಿನಲ್ಲಿ ಸ್ಪರ್ಷಜ್ಞಾನ ಇಲ್ಲದಿರುವುದು

7. ಅಂಗಾಲಿನಲ್ಲಿ ಹುಣ್ಣು
8. ಕಟಿಯಿಂದ ಪಾದದವರೆಗೆ ನೋವುಂಟಾಗುವುದು
9. ಮೊಣಕಾಲಿನಲ್ಲಿ ಕತ್ತರಿಸಿದಂತೆ ನೋವು
10. ಮೊಣಕಾಲಿನ ಸಂಧಿನಲ್ಲ ಶೈಥಿಲ್ಯ
11. ತೊಡೆಯಲ್ಲಿ ಸ್ಪರ್ಶಜ್ಞಾನ ಇಲ್ಲದಿರುವುದು
12. ತೊಡೆಯನ್ನು ಚಲಿಸಲು ಅಸಾಧ್ಯವಾಗುವುದು
13. ಅಪಾನ ಪೇಶಿಗಳು ಶಿಥಿಲವಾಗುವುದು
14. ಕಾಲುಗಳಲ್ಲಿ ರಕ್ತಹೀನತೆ
15. ಗುದದಲ್ಲಿ ನೋವು
16. ವೃಷಣಗಳು ಮೇಲೆ ಹೋಗುವುದು
17. ಅಂಡಸಂಧಿ ಎಂದರೆ ವಂಕ್ಷಣದಲ್ಲಿ ವಾಯುವು ತುಂಬಿಕೊಳ್ಳುವುದು
18. ಜನನೇಂದ್ರಿಯದಲ್ಲಿ ಸಂಜ್ಞಾಹಾನಿ
19. ವಾಯುವು ಅಸ್ವಭಾವಾಹಿಕ ಮಾರ್ಗ ಹಿಡಿಯುವುದು
20. ಮಲವು ತೆಳ್ಳಗಾಗುವುದು
21. ಶ್ರೋಣಿಯಲ್ಲಿ ನೋವು
22. ತೊಡೆಗಳಲ್ಲಿ ಚಲಿಸಲು ಬಲವಿಲ್ಲದಿರುವುದು
23. ಸಂಕುಚಿತ ಅಂಗಗಳಿಂದ ಕುಬ್ಜರಾಗುವುದು
24. ಸ್ನಾಯುಗಳ ಸಂಕುಚಿತದಿಂದ ಅಂಗಗಳ ವಕ್ರತೆ
25. ತ್ರಿಕಾಸ್ಥಿಯ ಸ್ತಂಭ
26. ವೃಷ್ಠವಂಶದ ಸ್ತಂಭ
27. ಮಿದುಳು ಅಶಕ್ತವಾಗುವುದು
28. ಪಾರ್ಶ್ವಗಳಲ್ಲಿ ನೋವು
29. ಹೃದಯದ ಪೇಶಿಗಳು ಶಿಥಿಲವಾಗುವುದು
30. ಹೊಟ್ಟೆಯನ್ನು ಕಟ್ಟಿದಂತೆ ನೋವಾಗುವುದು
31. ಎದೆಯು ನಡುಗಿದಂತಾಗುವುದು
32. ಕುತ್ತಿಗೆಯ ಸ್ನಾಯುವು ಸ್ತಬ್ಧವಾಗುವುದು
33. ಕೈಗಳು ಒಣಗುವುದು
34. ಹೃದಯವು ಭಾರವಾಗಿ ತೋರುವುದು
35. ಕಂಠನಾಳವು ಶುಷ್ಕವಾಗುವುದು
36. ಕಂಠಶಿರಗಳಲ್ಲಿ ಜ್ಞಾನವಿಲ್ಲದಿರುವುದು
37. ಕೆನ್ನೆಗಳಲ್ಲಿ ತುಂಡಿಸಿದಂತೆ ನೋವಾಗುವುದು
38. ಮಾತನಾಡುವ ಶಕ್ತಿಯಿಲ್ಲದಾಗುವುದು

39. ಹಲ್ಲುಗಳಲ್ಲಾಡುವುದು
40. ತುಟಿಯೊಡೆಯುವುದು
41. ರಸಜ್ಞಾನವಿಲ್ಲದಾಗುವುದು
42. ಹಲ್ಲು ತುಂಡಾಗುವುದು
43. ಮಾತು ತಡೆಯುವುದು
44. ಬಾಯಿಯಲ್ಲಿ ಒಗರು ರುಚಿಯಿರುವುದು
45. ಎದೆಯಲ್ಲಿ ಸೂಜಿಯಿಂದ ಚುಚ್ಚಿದಂತಾಗುವುದು
46. ಚುಚ್ಚಿದಂತೆ ಕಣ್ಣಿನಲ್ಲಿ ನೋವಾಗುವುದು
47. ಬಾಯಾರುವುದು
48. ಮೂಗಿನ ಶಕ್ತಿಯು ಕಡಿಮೆಯಾಗುವುದು
49. ಕಿವಿನೋವು
50. ಕಿವಿಯಲ್ಲಿ ಶಬ್ದವುಂಟಾಗುವುದು
51. ಗಟ್ಟಿಯಾಗಿ ಹೇಳಿದರೆ ಮಾತ್ರ ಕೇಳುವುದು ಅಥವಾ ಮೆಲ್ಲಗೆ ಹೇಳದರೆ ಗಟ್ಟಿಯಾಗಿ ಕೇಳುವುದು
52. ಕಿವಿ ಕೇಳದಾಗುವುದು
53. ಕಣ್ಣು ರೆಪ್ಪೆಗಳು ಚಲಿಸದಿರುವುದು
54. ಅರ್ಧ ಬಾಯಿಯು ವಕ್ರವಾಗುವುದು
55. ಪ್ರಕಾಶದಲ್ಲಿಯೂ ಕೂಡ ಕತ್ತಲೆಯಲ್ಲಿ ಪ್ರವೇಶಿಸಿದಂತಾಗುವುದು
56. ವರ್ತ್ಮ ಸಂಕೋಚ
57. ಕಣ್ಣುನೋವು
58. ಕಣ್ಣಿನ ರೆಪ್ಪೆ ಮುಚ್ಚದಿರುವುದು
59. ಅಂಗಾಂಗಗಳ ಶಕ್ತಿಯು ಕುಂದುವುದು
60. ಭ್ರುಕುಟಿಯು ವಿಸ್ತಾರವಾಗುವುದು
61. ಶರೀರ ನಡುಗುವುದು
62. ಶಂಖಾಸ್ಥಿಯು ತುಂಡುಮಾಡಿದಂತೆ ನೋವಾಗುವುದು
63. ತಲೆಯ ಚರ್ಮ ಒಡೆಯುವುದು
64. ತಲೆನೋವು
65. ಹಣೆಯು ಭೇದಿಸಿದಂತೆ ನೋವಾಗುವುದು
66. ಪಕ್ಷಪಾತ
67. ಆಕಳಿಕೆ ಬರುವುದು
68. ಅಂಗಗಳಲ್ಲಿ ಉಷ್ಣಾಧಿಕ್ಯ
69. ಎಲ್ಲಾ ಅಂಗಗಳಲ್ಲಿಯೂ ಚೈತನ್ಯವಿಲ್ಲದಿರುವುದು

70. ಆಷೇಪಕವೆಂಬ ವಾತರೋಗ
71. ಆಯಾಸವಾಗುವುದು
72. ಕಂಬದಂತೆ ಶರೀರದ ಚಲನೆಯಿಲ್ಲದಾಗುವುದು
73. ಉತ್ಸಾಹವಿಲ್ಲದಿರುವುದು
74. ಅರ್ಥಹೀನವಾದ ಮಾತನಾಡುವುದು
75. ಶರೀರದ ಅಂಗಗಳು ಚಲಿಸುತ್ತಲೇ ಇರುವುದು
76. ಚರ್ಮದಲ್ಲಿ ಕಪ್ಪು ಅಥವಾ ಕೆಂಪು ಬಣ್ಣ ಉಂಟಾಗುವುದು.
77. ಚರ್ಮವು ಒಣಗಿ ಒರಟಾಗುವುದು
78. ಹಿಕ್ಕಾ ಅಥವಾ ಬಿಕ್ಕಾ
79. ನಿದ್ರೆಯಿಲ್ಲದಿರುವುದು
80. ನಿಲ್ಲಲೂ, ಕುಳಿತುಕೊಳ್ಳಲೂ, ಮಲಗಲೂ ಇಚ್ಛೆಯಿಲ್ಲದಿರುವುದು

## ಪಿತ್ತ ವಿಕಾರದಿಂದಾಗುವ ರೋಗಗಳು

1. ಬೆಂಕಿಯಿಂದ ಸುಡುವಂತೆ ಅಥವಾ ಬೆಂಕಿಯ ಬಳಿಯಲ್ಲಿ ನಿಂತಂತೆ ಶರೀರದಲ್ಲಿ ಉರಿಯೇಳುವುದು
2. ಶರೀರದಲ್ಲಿ ಒಂದು ಕಡೆಯಲ್ಲಿ ಉರಿಯುವುದು
3. ಇಡೀ ಶರೀರ ಉರಿಯುವುದು
4. ಕುತ್ತಿಗೆಯಿಂದ ಹೊಗೆ ಹೊರಡುವಂತೆ ನೋವಾಗುವುದು
5. ಶರೀರದ ವಿಶಿಷ್ಟ ಸ್ಥಾನದಲ್ಲಿ ಕಠಿಣವಾದ ಉರಿಯುವಿಕೆ
6. ಶರೀರದ ಒಳಗೆ ಉರಿಯುವುದು
7. ಭುಜಗಳೆರಡೂ ಉರಿಯುವುದು
8. ಆಮಾಶಯದ ದಾಹ ಇದರಿಂದ ತಿಂದ ಆಹಾರವು ಕೂಡಲೇ ಜೀರ್ಣವಾಗುವುದು
9. ಹುಳಿ ನೀರಿನ ವಾಂತಿ
10. ಶರೀರದಲ್ಲಿ ದುರ್ಗಂಧವುಂಟಾಗುವುದು
11. ಹೆಚ್ಚು ಬೆವರುವುದು
12. ಶರೀರದಲ್ಲಿ ಸ್ವಾಭಾವಿಕ ಉಷ್ಣಕ್ಕಿಂತ ಹೆಚ್ಚು ಉಷ್ಣವಿರುವುದು

13-14. ರಕ್ತಮಾಂಸಗಳಲ್ಲಿ ದ್ರವವಧಿಕವಾಗುವುದು

15. ಕೈಕಾಲು ಒಡೆಯುವುದು
16. ಚರ್ಮದಲ್ಲಿ ದಾಹವುಂಟಾಗುವುದು
17. ಚರ್ಮವು ಒಡೆಯುವುದು

18. ದುಷಿತವಾದ ರಕ್ತವು ಮೂಗು, ಕಣ್ಣು, ಗುದ, ಮೂತ್ರದ್ವಾರ ಇವುಗಳ ಮೂಲಕ ಹರಿಯುವುದು
19. ಶರೀರದಲ್ಲಿ ಕೆಂಪು ಬಣ್ಣದ ಬೊಕ್ಕೆಗಳಿರುವುದು
20. ಚರ್ಮವು ಹಾಳೆಯಾಗಿ ಏಳುವುದು
21. ಅಂಗಗಳು ಹಸಿರು ಬಣ್ಣವಾಗುವುದು
22. ಕೆಂಬಣ್ಣದ ಉಂಗುರ ಹುಣ್ಣು
23. ಶರೀರಾಂಗಗಳಲ್ಲಿ ಹಳದಿ ಬಣ್ಣವುಂಟಾಗುವುದು
24. ಕೈ, ಪಾರ್ಶ್ವ, ಭುಜ ಮತ್ತು ಕಂಕುಳುಗಳಲ್ಲಿ ನೋವಿನಿಂದ ಕೂಡಿದ ಕಪ್ಪಾದ ಗುಳ್ಳೆಗಳುಂಟಾಗುವುದು.
25. ಬಾಯಿ ಕಹಿಯಾಗುವುದು
26. ಬಾಯಿ ವಾಸನೆ
27. ಶರೀರದಲ್ಲಿ ಅಲ್ಲಲ್ಲಿ ಕಪ್ಪು ಬಣ್ಣದ ಕಲೆಗಳುಂಟಾಗುವುದು
28. ಪಿತ್ತ ಹೆಚ್ಚಾದ್ದರಿಂದ ಸ್ವಾಭಾವಿಕ ಆಹಾರದಿಂದ ತೃಪ್ತಿಯಾಗದಿರುವುದು
29. ಬಾಯಿಯ ಚರ್ಮ ಒಡೆಯುವುದು
30. ಬಾಯಾರಿಕೆ ಹೆಚ್ಚಾಗುವುದು
31. ಕಾಮಾಲೆಯುಂಟಾಗುವುದು

32 ರಿಂದ 35. ಕುತ್ತಿಗೆ, ಕಣ್ಣಿನ ರೆಪ್ಪೆಯೊಳಗೆ, ಗುದ ಮತ್ತು ಮೂತ್ರದ್ವಾರಗಳು ಒಡೆಯುವುದು

36. ಕತ್ತಲೆಯಲ್ಲಿ ಪ್ರವೇಶಿಸಿದಂತಾಗುವುದು
37. ಅತ್ಯಾಯಾಸ
38. ಚರ್ಮ, ಕಣ್ಣು, ಮಲಮೂತ್ರಗಳಲ್ಲಿ ಹಳದಿ ಅಥವಾ ಹಸಿರು ಬಣ್ಣವಿರುವುದು
39. ಬಾಯಿಯಲ್ಲಿ ರಕ್ತದಂತೆ ವಾಸನೆ ಬರುವುದು
40. ಕೆಂಪು ಬಣ್ಣದ ಗುಳ್ಳೆಗಳು ಶರೀರದಲ್ಲುಂಟಾಗುವುದು

**ಕಫ ವಿಕಾರಾದಿ ರೋಗಗಳು**

1. ಊಟಮಾಡದಿದ್ದರೂ ಹೊಟ್ಟೆ ತುಂಬಿದಂತಿರುವುದು
2. ಆಲಸ್ಯ
3. ಹೆಚ್ಚು ನಿದ್ರೆ ಬರುವುದು
4. ಅಂಗಗಳು ಜಡರವಾಗಿರುವುದು
5. ಚರ್ಮದಲ್ಲಿ ಶೀತವು ಹೆಚ್ಚಾಗಿರುವಂತೆ ತೋರುವುದು
6. ಉತ್ಸಾಹವಿಲ್ಲದಿರುವುದು

7. ಬಾಯಿಯಲ್ಲಿ ಜೊಲ್ಲು ಸುರಿಯುವುದು
8. ಬಾಯಿ ಸಿಹಿಯಾಗಿರುವುದು
9. ಮೂಗು, ಕಣ್ಣು ಮೊದಲಾದವುಗಳಲ್ಲಿ ಮಲವಧಿಕವಾಗಿರುವುದು
10. ಬಲಾಸ (ಮಂದಜ್ವರ)
11. ಬಾಯಿಯಿಂದ ಕಫ ಸುರಿಯುವುದು
12. ಕಂಠದಲ್ಲಿಯೂ ಹೃದಯದಲ್ಲಿಯೂ ಕಫವು ಕಟ್ಟಿದಂತಿರುವುದು
13. ಶರೀರದಲ್ಲಿ ಬಿಳಿ ಬಣ್ಣ ಬರುವುದು
14. ವಾತವಾಹಿನಿ ಧಮನಿಗಳ ವಿರುದ್ಧವಾದಂತಿರುವುದು
15. ತುರಿಕೆಯಿಂದ ಕೂಡಿದ ಹುಣ್ಣು
16. ಮಂದಾಗ್ನಿತ್ವ
17. ಕುತ್ತಿಗೆಯಲ್ಲಿ ನೇತಾಡುವ ಗಲಗಂಡವೆಂಬ ಬೀಗು
18. ಹೆಚ್ಚು ಸ್ಥೂಲತೆ ಬರುವುದು
19. ಕಣ್ಣು, ಮೂತ್ರ ಮತ್ತು ಮಲಗಳಲ್ಲಿ ಬಿಳಿ ಬಣ್ಣವಿರುವುದು

ಮಾನವ ಶರೀರವು ಅನೇಕ ಭಾಗಗಳುಳ್ಳದ್ದು. ಪ್ರತಿಯೊಂದು ಭಾಗವು ತನ್ನದೆ ಆದ ಆವರಣದಲ್ಲಿ ಸ್ಪಂದನ ಕ್ರಿಯೆಗೊಳಗಾಗುವುದು. ಪ್ರತಿಯೊಂದು ಭಾಗವು ಬೇರೆಲ್ಲ ಭಾಗಗಳಿಂದ ಸ್ವಾತಂತ್ರ್ಯ ಹೊಂದಿದ್ದರೂ ಪರಸ್ಪರ ಸಂಬಂಧ ಕಲ್ಪಿಸಿಕೊಂಡು ಅವಿಭಾಜ್ಯ ಮಾನವ ಶರೀರ ಸೃಷ್ಟಿಗೆ ಕಾರಣವಾಗಿದೆ – ಈ ರೀತಿ ತಿಳಿಸಿರುವುದು ಯೋಗಶಾಸ್ತ್ರ.

ಸಪ್ತತತ್ವ, ಸಪ್ತವಿಭಾಗವುಳ್ಳ ಶರೀರ ಸ್ಥೂಲದೇಹದಿಂದ ದೈವೀಕತ್ವದಲ್ಲಿ ಲೀನವಾಗುವವರೆಗೆ ಚೈತನ್ಯಮಯವಾಗಲು ಸಾಧ್ಯ.

1. ಸ್ಥೂಲ ಶರೀರ–ಜಡ ಶರೀರ
2. ಸೂಕ್ಷ್ಮ ಶರೀರ
3. ಪ್ರಾಣ ಅಥವ ಚಿತ್‌ಶರೀರ
4. ಅಂತಸ್ಫೂರ್ತಿ
5. ಬುದ್ಧಿ
6. ಭೌದ್ಧಿಕ
7. ಆಧ್ಯಾತ್ಮ (ದೈವತ್ವ)

ಭೌತಿಕ ಶರೀರದಿಂದ–ದೈವತ್ವ ಹೊಂದಲು ಪ್ರತಿಹಂತದಲ್ಲೂ ಅಡ್ಡಿ ಆತಂಕಗಳು ಇಲ್ಲದಿಲ್ಲ. ಇದರ ನಿವಾರಣೆ ಎಂದರೆ ತಡೆಯನ್ನುಂಟುಮಾಡುವುದರ ನಿವಾರಣೆ, ಇದರಿಂದ ಜನ್ಮದ ಸಾರ್ಥಕತೆ.

ಇಂತಹ ಸಪ್ತ ತತ್ವಮಯ ಶರೀರ ರಚನೆಯ ವಿವರಣೆಯಲ್ಲಿ ಆರೋಗ್ಯಶಾಸ್ತ್ರ (hygiene) ಪ್ರತಿಪಾದಿಸುವ ಹಲವು ಅಂಶಗಳನ್ನು ಇಲ್ಲಿ ಗಮನಿಸಿ.

**ಪ್ರತಿಯೊಬ್ಬ ಆರೋಗ್ಯವಂತ ಮಾನವನ ಶರೀರದಲ್ಲಿ** – ಒಂದು ಕೋಳಿ ಗೂಡನ್ನು ಬಳಿಯಲು ಬೇಕಾಗುವಷ್ಟು **ಸುಣ್ಣ**, 3 ಅಂಗುಲದ ಮೊಳೆಯನ್ನು ತಯಾರಿಸಲು ಅಗತ್ಯವಾದಷ್ಟು **ಕಬ್ಬಿಣ**, 7 ಬಾರು ಸಾಬೂನನ್ನು ತಯಾರಿಸಲು ಅಗತ್ಯವಾದಷ್ಟು **ಕೊಬ್ಬು**, 2200 ಬೆಂಕಿ ಕಡ್ಡಿಗಳನ್ನು ತಯಾರಿಸಲು ಬೇಕಾದಷ್ಟು **ರಂಜಕ**, ಹಲವು ಸಹಸ್ರ ಸೀಸದ ಕಡ್ಡಿಗಳನ್ನು ತಯಾರಿಸಲು ಅಗತ್ಯವಾದ **ಘನ ಇಂಗಾಲ**, 45-46 ಲೀಟರ್‌ಗಳಷ್ಟು **ನೀರು, ಅಲ್ಪಭಾಗ ಮೆಗ್ನೀಷಿಯಂ ಮತ್ತು ಗಂಧಕ**–ಇವುಗಳಿರುವುದೆಂಬ ವಿಚಾರ ಆರೋಗ್ಯಶಾಸ್ತ್ರ ಪಂಡಿತರಿಗೆ ತಿಳಿದೇ ಇದೆ. ಈ ವಿವರಣೆಯಿಂದ ನಮಗೆ ತಿಳಿಯುವ ವಿಷಯವೇನೆಂದರೆ ಬಾಹ್ಯವಿಶ್ವದಲ್ಲಿ ದೊರಕುವ ರಾಸಾಯನಿಕ ಯುಕ್ತಲೋಹ ಸಂಬಂಧಿತ ವಸ್ತುಗಳು ಮಾನವ ಶರೀರದಲ್ಲೂ ಅಡಗಿವೆ. ಬಾಹ್ಯ ವಿಶ್ವಕ್ಕೂ ಆಂತರಿಕ ಶರೀರಕ್ಕೂ-ಕ್ರಿಯಾಭೇದವಿಲ್ಲ ಎಂಬುದು.

ಶರೀರದ ಬಗ್ಗೆ ಮತ್ತೊಂದು ವೈಜ್ಞಾನಿಕ ವಿವರಣೆಯನ್ನು ನೋಡಿ. ಶರೀರ ರಚನೆ ಕಣಗಳಿಂದ ಮಾಡಲ್ಪಟ್ಟದ್ದು. ಈ ಕಣಗಳು ಪ್ರತಿಕ್ಷಣದಲ್ಲೂ ಒಡೆದು ವಿನಾಶ ಹೊಂದುವುದರಲ್ಲೂ, ಪುನಃ ಪುನಃ ಸೃಷ್ಟಿಯಾಗುವುದರಲ್ಲೂ ಸದಾ ನಿರತವಾಗಿವೆ. **ಹೀಗೆ ಪ್ರತಿ ಏಳು ವರ್ಷಗಳಿಗೊಮ್ಮೆ ಶರೀರಾದ್ಯಂತ ಕಣಸೃಷ್ಟಿ ವಿನಾಶದಿಂದ ನವೀಕರಣವಾಗುವುದೆಂದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.**

ಶರೀರ ರಚನೆಯ ಬಗ್ಗೆ ಮತ್ತೂ ಹೆಚ್ಚಿನ ಆಳವಾದ ಅಧ್ಯಯನ ಮಾಡೋಣ. ಶರೀರದಲ್ಲಿರುವ ರಾಸಾಯನಿಕ ಮತ್ತು ಲೋಹ ಸಂಬಂಧ ವಸ್ತುಗಳು ಸೂಕ್ಷ್ಮ ರೂಪಗೊಂಡು ಅಣುರೂಪ ಹೊಂದಿ ದೇಹದ ಆಕಾರ, ಗುಣ, ಲಿಂಗ ಇತ್ಯಾದಿಗಳಿಗೆ ಕಾರಣವಾಗಿದೆ. ಒಂದು ಕಾಲದಲ್ಲಿ ಅಣು ಅವಿಭಾಜ್ಯವೆಂದು ನಿರ್ಧರಿಸಿದ ವಿಜ್ಞಾನ ಇಂದು ಅಣುವಿನ ಆಂತರ್ಯದಲ್ಲಿ ಬೀಜಾಣುವಿದೆ ಎಂದು ಸಾರುತ್ತಿದೆ. ಈ ಬೀಜಾಣು ಕೇಂದ್ರವನ್ನಾಗಿಟ್ಟು ಇದರ ಸುತ್ತಲೂ ಎಲೆಕ್ಟ್ರಾನ್‌ಗಳೂ ಸುತ್ತುತ್ತಿವೆ. ಪ್ರತಿ ಎಲೆಕ್ಟ್ರಾನ್‌ನಲ್ಲೂ ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳಿದ್ದು ವಿದ್ಯುತ್ ಪ್ರವಾಹ ವಿದ್ಯುತ್ತಿನ ತಡೆಗೆ ಕಾರಣವಾಗಿದೆ. ಅಂದರೆ ಶರೀರವು ಅಣು ಪರಮಾಣುಗಳ, ಎಲೆಕ್ಟ್ರಾನ್‌ಗಳ, ಎಲೆಕ್ಟ್ರಾನ್‌ಗಳಲ್ಲಿರುವ ಪ್ರೋಟಾನ್–ನ್ಯೂಟ್ರಾನ್‌ಗಳ ಸಂಯೋಜಿತಗೊಂಡ ನಿವಾಸ ಸ್ಥಾನವಾಗಿದೆಯೆಂದು ನಿರ್ಧರಿಸಿದಂತಾಯ್ತು.

ಇದರಿಂದ ವಿದ್ಯುತ್ ವಾಹಕವು ಪ್ರತಿ ವಸ್ತುವಿನಲ್ಲೂ ಸದಾ ಕಾಲದಲ್ಲಿ ಉಂಟಾಗುತ್ತಿರುತ್ತವೆ ಎಂದು ತಿಳಿಯಿತು. ಎಲೆಕ್ಟ್ರಾನ್ ಮತ್ತು ಕೇಂದ್ರ ಬೀಜಾಣುವಿನ ಮಧ್ಯೆ ಸೂಕ್ಷ್ಮವಾದ ಶೂನ್ಯ ಪ್ರದೇಶವಿದೆ. ಇದನ್ನು ಆಕಾಶ ತತ್ವಕ್ಕೆ ಹೋಲಿಸ

ಲಾಗಿದೆ. ಅಣು, ಬೀಜಾಣು, ಎಲೆಕ್ಟ್ರಾನ್, ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳು ಶರೀರದಲ್ಲಿ ನಿರ್ವಹಿಸುತ್ತಿರುವ ಕಾರ್ಯಾಚರಣೆಯನ್ನು ಸೌರವ್ಯೂಹ ಹಾಗೂ ಅದರ ಸುತ್ತಲೂ ತಿರುಗುತ್ತಿರುವ ಗ್ರಹಗಳ ಚಲನೆಗೆ ಹೋಲಿಸಬಹುದಾಗಿದೆ. ಇವೆರಡರಲ್ಲೂ ಏಕಸಾಮ್ಯತೆ ಕಂಡುಬಂದಿದೆ.

ಪೃಥ್ವಿ, ಆಪ್, ತೇಜಸ್ಸು, ವಾಯು ಮತ್ತು ಆಕಾಶ ಈ ಪಂಚಮಹಾ ತತ್ವಗಳ ಆಧಾರದಿಂದ ಸೃಷ್ಟಿಯಾಗಿರುವ ವಿಶ್ವಕ್ಕೂ ಅದೇ ಪಂಚ ಮಹಾಭೂತ ಆಧಾರದಿಂದ ಸಂಯೋಜಿತಗೊಂಡಿರುವ ಮಾನವನ ಶರೀರಕ್ಕೂ ಸಂಪೂರ್ಣ ಹೋಲಿಕೆ ಇದೆ.

ಭಾರತೀಯ ದಾರ್ಶನಿಕರು ಅಣು ಪರಮಾಣುಗಳು-ಪಂಚಭೌತಿಕ ತತ್ವಗಳುಳ್ಳವೆಂದಿದ್ದಾರೆ. ಹೀಗೆ ಮೇಲಿನ ವಿವರಣೆಗಳಿಂದ ಬಾಹ್ಯ ಜಗತ್ತಿನ ವಸ್ತುಗಳೂ, ಶರೀರದಲ್ಲಿರುವ ವಸ್ತುಗಳೂ ಅಣು ಪರಮಾಣುಗಳಿಂದ ರೂಪಗೊಂಡಿರುವುದಾಗಿ ತಿಳಿದಂತಾಯ್ತು.

**ಸಪ್ತ ವರ್ಣಮಯ ಶರೀರ :** ಸಪ್ತ ಧಾತು, ತ್ರಿದೋಷಯುಕ್ತ, ಸಪ್ತತತ್ವ ಆಧಾರಿತ ಮಾನವನ ಶರೀರದಲ್ಲಿ ಭೂಮಿಯ ಹೊರಗೂ ಒಳಗೂ ದೊರಕುವ ಲೋಹ ವಸ್ತುಗಳು, ಜಲ, ಇಂಗಾಲ ವಸ್ತುಗಳಿದ್ದು ಅಣು ಪರಮಾಣು ರೂಪ ಹೊಂದಿ ವಿಭಜನೆ ಸ್ಪಂದನೆಗಳಿಗೊಳಗಾಗಿ ಜಾಗೃತ ಮತ್ತು ಸುಪ್ತ ಚೈತನ್ಯ ಶಕ್ತಿಗಳನ್ನು ಸೃಷ್ಟಿಸಿ ಸ್ವಾಸ್ಥ ರಕ್ಷಣಾ ಕಾರ್ಯದಲ್ಲಿ ಮಗ್ನವಾಗಿವೆ. ಈ ವಿವರಣೆಯಿಂದ ಬಾಹ್ಯ ವಿಶ್ವಕ್ಕೂ ಆಂತರಿಕ ಶರೀರಕ ಕ್ರಿಯೆಗಳಿಗೂ ಸಂಬಂಧವಿದೆಯೆಂದು ಪ್ರತಿಪಾದಿಸಿದಾಗಿದೆ.

ಆರ್ಷ ಆಯುರ್ವೇದ ವಿಜ್ಞಾನಿ ವಾಗ್ಭಟನು ಸ್ವಾಸ್ಥವೃತ್ತನ (ಸಂಪೂರ್ಣ ಆರೋಗ್ಯವಂತ ವ್ಯಕ್ತಿಯ) ಲಕ್ಷಣ ಕುರಿತು-"ಸಮ ದೋಷಃ ಸಮಾಗ್ನಿಶ್ಚ ಸಮಧಾತು ಮಲಕ್ರಿಯಃ । ಪ್ರಸನ್ನಾತ್ಮೇಂದ್ರಿಯ ಮನಾಃ ಸ್ವಸ್ಥ ಇತ್ಯಭಿದೀಯತೆ ॥" ಎಂದು ನುಡಿದಿರುವನು.

ವಾತ, ಪಿತ್ತ ಮತ್ತು ಕಫವೆಂಬ ತ್ರಿದೋಷಗಳು ಸಮಸ್ಥಿತಿಯಲ್ಲಿರಬೇಕು ; ಪಾಚಕಾಗ್ನಿ ಮತ್ತು ಧಾತ್ವಾಗ್ನಿಗಳು ಸಮ ಪ್ರಮಾಣದಲ್ಲಿರಬೇಕು ; ರಸ, ರಕ್ತ, ಮಾಂಸ, ಅಸ್ಥಿ, ಮೇದಸ್ಸು, ಮಜ್ಜಾ ಮತ್ತು ಶುಕ್ರವೆಂಬ ಸಪ್ತ ಧಾತುಗಳು ಸಮ ಸ್ಥಿತಿಯಲ್ಲಿರಬೇಕು ; ಶರೀರಕ್ಕೆ ಅನಗತ್ಯವೆನಿಸಿದ ಮಲಗಳನ್ನು ಕ್ರಮವಾಗಿ ಹೊರದೂಡುತ್ತಿರಬೇಕು ; ಇವೆಲ್ಲಕ್ಕೂ ಮಿಗಿಲಾದ ಸಂತುಷ್ಟವಾದ ಆತ್ಮವೂ ಅಗತ್ಯ ; ಪಂಚಕರ್ಮೇಂದ್ರಿಯಗಳಾದ ಕಿವಿ, ಕಣ್ಣು, ನಾಲಿಗೆ, ಮೂಗು ಮತ್ತು ಚರ್ಮ ಇವುಗಳೂ ಪಂಚಜ್ಞಾನೇಂದ್ರಿಯಗಳಾದ ಶಬ್ಧ, ಸ್ಪರ್ಶ, ರೂಪ, ರಸ, ಗಂಧ ಇವುಗಳೂ ಸುಸ್ಥಿತಿಯಲ್ಲಿರಬೇಕು ; ಹೀಗೆ ಇದ್ದ ವ್ಯಕ್ತಿಯು ಮಾತ್ರ ಸ್ವಾಸ್ಥವೃತ್ತನು ಎಂದು ಪರಿಗಣಿಸಬೇಕೆಂದು ಮೇಲಿನ ಶ್ಲೋಕಾರ್ಥವಾಗಿದೆ.

ಆಯುರ್ವೇದ ವಿಜ್ಞಾನಕ್ಕಿಂತಲೂ ಬಹುಹಿಂದೆ ಮಾನವ ಶರೀರದಲ್ಲಿ ಸುಪ್ತ ರೀತಿಯಲ್ಲಿ ನಾನಾ ವರ್ಣಗಳಿವೆ. ಇವು ರೋಗ ಗ್ರಸ್ತದಲ್ಲಿ ವಿಕಾರ, ವಿವರ್ಣತೆಗಳನ್ನು ಹೊಂದುವುದೆಂದು ನಮ್ಮ ದೇಶದ ಶೃತಿ ಸಂಹಿತೆ ಪುರಾಣ, ಯೋಗಭ್ಯಾಸ ಗ್ರಂಥಗಳಿಂದ ತಿಳಿದುಬರುತ್ತದೆ. **ವಿಶ್ವದ ಜೀವದಾತ ಸೂರ್ಯ** – ಸೂರ್ಯನಿಂದ ಸಪ್ತವರ್ಣ ಕಿರಣಗಳ ಬಿಡುಗಡೆ ಈ ವರ್ಣ ಕಿರಣಗಳನ್ನು ಬೇರೆ ಬೇರೆಯಾಗಿ ಸೆರೆ ಹಿಡಿದು ರೋಗಿಯ ಬಾಹ್ಯ ಶರೀರದ ಮೇಲೆ ಪ್ರಯೋಗಿಸುವುದು ಒಂದು ವಿಧಾನ. ವರ್ಣದ ಗಾಜಿನ ಸೀಸೆಗಳಲ್ಲಿ ಶುದ್ಧ ಜಲ, ಗೋಕ್ಷೀರ, ತಿಲತೈಲ ಇತ್ಯಾದಿಗಳನ್ನು ತುಂಬಿಸಿ ಸೂರ್ಯ ಕಿರಣಗಳ ಪ್ರಭಾವಕ್ಕೆ ಒಳಪಡಿಸಿ ಔಷಧಿ ರೂಪದಲ್ಲಿ ರೋಗಿಗೆ ಸೇವಿಸಲು ಕೊಡುವುದು, ಬಾಹ್ಯ ಲೇಪನ ಮಾಡಿಸುವುದು ಮತ್ತೊಂದು ವಿಧಾನ. ಈ ಎರಡು ವಿಧಾನಗಳಿಂದ ರೋಗ ಗುಣಪಡಿಸುವ ಕ್ರಮ ನಮ್ಮ ಆಯುರ್ವೇದಾಚಾರ್ಯರು ಚೆನ್ನಾಗಿ ಅರಿತಿದ್ದರು.

ಸೂರ್ಯನ ಕಿರಣಗಳಲ್ಲಿ ನೇರಳೆ, ಗುಲಾಬಿ, ನೀಲ, ಹಸಿರು, ಹಳದಿ, ಕಿತ್ತಳೆ ಮತ್ತು ಕೆಂಪು ಎಂಬ ಏಳು ವರ್ಣಗಳಿವೆ. ಒಂದೊಂದು ಅಗತ್ಯ ವರ್ಣವನ್ನು ವಿಂಗಡಿಸಿಕೊಂಡು ರೋಗಿಯ ಮೇಲೆ ಪ್ರಯೋಗಿಸುವುದು, ವರ್ಣ ಔಷಧಿಗಳನ್ನು ತಯಾರಿಸಿ ಪ್ರಯೋಗಿಸುವುದು, ಅಸಾಧ್ಯರೋಗ ನಿವಾರಣೆಗಳಲ್ಲಿ ಉಪಯುಕ್ತವಾಗಿ ಕಂಡುಬಂದಿದೆ. ಇಂದು ಅನೇಕ ಪಾಶ್ಚಾತ್ಯ ವಿಜ್ಞಾನಿಗಳು, ವೈದ್ಯರೂ ವರ್ಣಪ್ರಭಾವ ಮಾನವನ ಮೇಲೆ ಮಹತ್ವ ಪರಿಣಾಮ ಬೀರುವುದೆಂದು ಪ್ರಾಯೋಗಿಕವಾಗಿ ಖಚಿತಪಡಿಸಿದ್ದಾರೆ.

ವರ್ಣಮಯ ಶರೀರದ ಬಗ್ಗೆ ಸ್ವಾಮಿ ಮುಕ್ತಾನಂದ ಪರಮಹಂಸರ ಅನುಭವಗಳನ್ನು ಅವರ ಗ್ರಂಥ "ಚಿತ್ ಶಕ್ತಿ ವಿಲಾಸ"ದಿಂದ ಆರಿಸಿ ಇಲ್ಲಿ ಕೊಡಲಾಗಿದೆ.

ನಮಗೆ ಪ್ರತ್ಯಕ್ಷ ಕಾಣುವ ಈ ಸ್ಥೂಲ ಶರೀರವು ಮೊದಲನೆಯದಾಗಿದೆ. ಅದರ ಬಣ್ಣ ಕೆಂಪು. ಎರಡನೆಯವೆಂದರೆ ಸೂಕ್ಷ್ಮ ಶರೀರವು. ಅದು ಅಂಗುಷ್ಠಾಕಾರವುಳ್ಳದ್ದಾಗಿದೆ ಮತ್ತು ಅದರ ವರ್ಣ ಶುಭ್ರ. ನಿದ್ರೆ ಮತ್ತು ಸ್ವಪ್ನಗಳು ಈ ಸೂಕ್ಷ್ಮ ಶರೀರದಲ್ಲಿಯೇ ಆಗುತ್ತವೆ. ಮೂರನೆಯದು ಶರೀರ. ಅದರ ಆಕಾರವು ಅನಾಮಿಕೆಯ ಬೆರಳಿನ ತುದಿಯಷ್ಟಿದೆ. ಅದರ ಬಣ್ಣ ಕಪ್ಪು. ನಾಲ್ಕನೆಯದು ಮಹಾಕಾರಣ ಶರೀರವಾಗಿದೆ. ಅದು ಎಳ್ಳಿನಷ್ಟು ಸಣ್ಣದಿದೆ. ಅದು ನೀಲಿ ಬಣ್ಣದ್ದಿದೆ. ಈ ನಾಲ್ಕನೆಯ ಶರೀರವು ಬಹಳ ಮಹತ್ವದ್ದಿದೆ. ಅದು ಅತಿ ತೇಜೋಮಯವಾಗಿದೆ. ಸಾಧನೆಯ ಮೂಲವು ಅದೇ ಆಗಿದೆ. ಅಂತರಂಗದಲ್ಲಿಯ ಪರಮೋಚ್ಚ ದೃಷ್ಟಾಂತರವೂ ಅದೇ.

(ನನ್ನ ಸಾಧನ ಕಾಲದ ಅನುಭವಗಳು – "ಚಿತ್ ಶಕ್ತಿ ವಿಲಾಸ", ಪುಟ 92).

## ಜೀವಾತ್ಮನ ಜ್ಯೋತಿರ್ಮಯವಾದ ನಾಲ್ಕು ಶರೀರಗಳು

"ಜೀವಾತ್ಮನು ನಾಲ್ಕು ಕೋಶಗಳಲ್ಲಿ ವಿರಾಜಮಾನವಾಗಿದ್ದಾನೆ. ಒಂದು ಕೋಶದಲ್ಲಿ ಮತ್ತೊಂದು ಕೋಶವು ಸಮಾವೇಶವಾಗಿದೆ. ನಾನು ಇವುಗಳಿಗೆ ರಕ್ತ, ಶ್ವೇತ, ಕೃಷ್ಣ ಮತ್ತು ನೀಲ ಎಂಬ ಹೆಸರನ್ನಿಟ್ಟು ವರ್ಣಿಸಿದ್ದೇನೆ. ರಕ್ತವೆಂದರೆ ಸ್ಥೂಲ ಶರೀರ, ಕೃಷ್ಣವೆಂದರೆ ಕಾರಣ ಶರೀರ, ಶ್ವೇತವೆಂದರೆ ಸೂಕ್ಷ್ಮ ಶರೀರ, ನೀಲವೆಂದರೆ ಮಹಾಕಾರಣ ಶರೀರಗಳಾಗಿವೆ. ಮಹಾಕಾರಣ ಶರೀರವು ಎಳ್ಳಿನಾಕಾರದ ನಿಲೇಶ್ವರಿಯ ಮಧ್ಯದಲ್ಲಿದೆ. ಈ ಸಣ್ಣ ಬಿಂದುವು ತ್ರಿಭುವನಗಳನ್ನೂ ಮೂರು ಶರೀರಗಳನ್ನೂ ವ್ಯಾಪಿಸಿದ್ದನ್ನು ನೀವು ಧ್ಯಾನದ ಮುಖಾಂತರ ಪೂರ್ಣವಾಗಿ ತಿಳಿದುಕೊಳ್ಳಬಲ್ಲಿರಿ.

(ನನ್ನ ಸಾಧನ ಕಾಲದ ಅನುಭವಗಳ "ಚಿತ್ ಶಕ್ತಿ ವಿಲಾಸ"–147)

### ಜೀವಾತ್ಮನ ನಾಲ್ಕು ಶರೀರಗಳು

| ಶರೀರ | ವರ್ಣ | ಅವಸ್ಥೆ | ಸ್ಥಾನ | ಪ್ರಮಾಣ |
|---|---|---|---|---|
| ಸ್ಥೂಲ | ಕೆಂಪು | ಜಾಗ್ರತ | ನೇತ್ರ | 3½ ಮೊಳ |
| ಸೂಕ್ಷ್ಮ | ಬಿಳಿ | ಸ್ವಪ್ನ | ಕಂಠ | ಅಂಗುಷ್ಟ |
| ಕಾರಣ | ಕಪ್ಪು | ಸುಷುಪ್ತಿ | ಹೃದಯ | ಪರ್ವಾರ್ಥ |
| ಮಹಾಕಾರಣ | ನೀಲ | ತುರೀಯ | ಸಹಸ್ರಾರು | ಚೆನ್ನಂಗಿ |

**ಶರೀರದಲ್ಲಿರುವ ಚಕ್ರಗಳ ಸ್ಥಾನ, ತತ್ವ, ವರ್ಣ, ಕಿರಣ ಸಂಖ್ಯೆ ಸಂಬಂಧಿಸಿದ ಗ್ರಹ ಮತ್ತು ರತ್ನ**

| ಚಕ್ರದ ಹೆಸರು | ಶರೀರದಲ್ಲಿರುವ ಸ್ಥಾನ | ದಳಗಳ ಸಂಖ್ಯೆ | ತತ್ವ | ವರ್ಣ | ಕಿರಣಗಳ ಸಂಖ್ಯೆ | ಸಂಬಂಧಿಸಿದ ಗ್ರಹ | ಸಂಬಂದಿಸಿದ ರತ್ನ |
|---|---|---|---|---|---|---|---|
| ಮೂಲಾಧಾರ | ಯೋನಿ | 4 | ಭೂತತ್ವ | ರಕ್ತ ಕೆಂಪು | 56 | ರವಿ | ಮಾಣಿಕ್ಯ |
| ಸ್ವಾಧಿಷ್ಠಾನ | ಮೆಷ್ರ | 6 | ಜಲತತ್ವ | ಸಿಂಧೂರ | 62 | ಚಂದ್ರ | ಮುತ್ತು |
| ಮಣಿಪೂರ | ಹೊಕ್ಕಳು | 10 | ಅಗ್ನಿತತ್ವ | ನೀಲ | 52 | ಕುಜ | ಹವಳ |
| ಅನಾಹತ | ಹೃದಯ | 12 | ವಾಯುತತ್ವ | ಅರುಣ | 54 | ಬುಧ | ಪಚ್ಚೆ |
| ವಿಶುದ್ಧಿ | ಕಂಠ | 16 | ಆಕಾಶತತ್ವ | ಧೂಮ್ರ | 72 | ಗುರು | ಪುಷ್ಪರಾಗ |
| ಅಜ್ಞಾ | ಭ್ರೂಮಧ್ಯ | 2 | ಮನಸ್ತತ್ವ | ಶ್ವೇತ | 64 | ಶುಕ್ರ | ವಜ್ರ |
| | | | | | ಒಟ್ಟು 360 | | |
| ಸಹಸ್ರಾರ | ಬ್ರಹ್ಮರಂಧ್ರ | 1000 | ಅಂತಿಮ ಗುರಿಸಾಧನೆ | ಸರ್ವ ವರ್ಣ | | ಶನಿ | ನೀಲ |

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಶರೀರದಲ್ಲಿ ಶಕ್ತಿ ಕೇಂದ್ರಗಳಾದ ಚಕ್ರಗಳ ಸ್ಥಾನ, ಅವುಗಳ ದಳಗಳ ಸಂಖ್ಯೆ, ಅವುಗಳ ತತ್ವ, ವರ್ಣ ಕಿರಣಗಳ ಸಂಖ್ಯೆ, ಅವುಗಳಿಗೆ ಸಂಬಂಧಿಸಿದ ಗ್ರಹ ಮತ್ತು ರತ್ನ ಯಾವುದೆಂದು ತಿಳಿದುಬರುವುದು.

ರಾಶಿಚಕ್ರ 360 ಡಿಗ್ರಿಯದೆಂದು ಜ್ಯೋತಿಶ್ಶಾಸ್ತ್ರದಲ್ಲಿ ತಿಳಿಸಿರುವಂತೆ ಶರೀರ ದಲ್ಲಿರುವ ಚಕ್ರಗಳ ಕಿರಣಗಳನ್ನು 360 ಸಂಖ್ಯೆಯೆಂದು ತಿಳಿಸಿರುವುದರಿಂದ ಇವೆರಡಕ್ಕೂ ಏನೋ ಸಂಬಂಧವಿದ್ದಿರಬೇಕೆಂದು ನಮಗನಿಸುವುದು ಹಾಗೂ ಶರೀರದ ಚಕ್ರಗಳಿಗೂ ದೃಷ್ಟಿಗೆ ಗೋಚರಿಸುವ ಗ್ರಹಗಳಿಗೂ ಸಂಬಂಧ ಕಲ್ಪಿಸಿರುವ ಜ್ಯೋತಿಶ್ಶಾಸ್ತ್ರ ಸಂಹಿತೆಗಳು ಶರೀರದ ಮೇಲೆ ಗ್ರಹಗಳ ಪರಿಣಾಮಕ್ಕಿಂತಲೂ ಶಕ್ತಿಪೀಠಗಳಾದ ಈ ಚಕ್ರಗಳ ಮೇಲೆ ಹೆಚ್ಚು ಪ್ರಭಾವ ಬೀರುವ ಸಾಧ್ಯತೆಯನ್ನು ಮನಗಂಡಿರಬೇಕು. ಆದುದರಿಂದ ರಾಶಿ, ಗ್ರಹ, ವರ್ಣಕಿರಣ ಸಂಬಂಧವಿದ್ದ ಮೇಲೆ ಆ ಗ್ರಹ ಸಂಬಂಧಿತ ರತ್ನವನ್ನು ಸೂಚಿಸುವುದು ಅನುಚಿತವೇನಲ್ಲ.

ಆಂಗ್ಲ ಭಾಷೆಯಲ್ಲಿ ಈ ಚಕ್ರಗಳ ಸ್ಥಾನದ ವಿವರಣೆ—

1. ಮೂಲಾಧಾರ - Pelvic Plexes
2. ಸ್ವಾಧಿಷ್ಠಾನ - Hypogastric Plexes
3. ಮಣಿಪೂರ - Epigastric Plexes
4. ಅನಾಹತ - Cardiac Plexes
5. ವಿಶುದ್ಧಿ - Cortid Plexes
6. ಆಜ್ಞಾ -Between thc Eyebrows
7. ಸಹಸ್ರಾರ - At the Centre of the Head

ಬೆನ್ನು ಹುರಿಯೊಳಗೆ ಇಡಾ, ಪಿಂಗಳ ಸುಷುಮ್ನ ಎಂಬ ನಾಡಿಗಳಿವೆ. ಇಡಾ ನಾಡಿಗೆ ಚಂದ್ರನಾಡಿಯೆಂದೂ, ಪಿಂಗಳನಾಡಿಗೆ ಸೂರ್ಯನಾಡಿಯೆಂದೂ ಕರೆಯುವರು ಇಡಾನಾಡಿಯು ಶುಭ್ರವರ್ಣದ್ದು, ಪಿಂಗಳನಾಡಿಯು ರಕ್ತವರ್ಣದ್ದು, ಸುಷುಮ್ನವು ಅಗ್ನಿಸ್ವರೂಪದ್ದು. ಇಡಾ ಶೀತವೂ, ಪಿಂಗಳ ಉಷ್ಣವೂ ಆಗಿದೆ.

ಮಾನವ ಶರೀರ ಕೇವಲ ಮಾಂಸದ ಮುದ್ದೆಯಲ್ಲ. ಷಟ್ಚಕ್ರಗಳ, ನವ ದ್ವಾರಗಳ ಸಪ್ತ ಧಾತುಗಳ, 72,000 ನಾಡಿಗಳಿಂದ ತುಂಬಿರುವ ದೇವಮಂದಿರವೆನ್ನ ಬಹುದು. ಈ 72,000 ನಾಡಿಗಳಲ್ಲಿ 100 ನಾಡಿಗಳು ಮುಖ್ಯವಾದವು. ಈ 100 ನಾಡಿಗಳಲ್ಲಿ 10 ಶ್ರೇಷ್ಠವಾದವು. ಈ 10 ನಾಡಿಗಳಲ್ಲಿ 3 ನಾಡಿಗಳು ದೊಡ್ಡವು. ಈ 3 ನಾಡಿಗಳಲ್ಲಿ ಮಧ್ಯೆ ಇರುವ ನಾಡಿಯೇ ಸುಷುಮ್ನಾ. ಈ ನಾಡಿಯೇ ಜೀವನದ ಸಕಲ ಕಾರ್ಯಗಳ ಸಿದ್ಧಿಗೆ ಆಧಾರ. ಇದು ಮೂಲಾಧಾರದಿಂದ ಸಹಸ್ರಾರದವರೆಗೆ

ವ್ಯಾಪಿಸಿದೆ. ಮೂಲಾಧಾರವೇ ಕುಂಡಲಿನೀ ಶಕ್ತಿಯ ಠಾಣ್ಯ. ಈ ಕುಂಡಲಿನೀ ಶಕ್ತಿಯು ಸುರುಳಿ ಸುತ್ತಿಕೊಂಡು ಮೂಲಾಧಾರದಲ್ಲಿ ಮಲಗಿದೆ. ಸರ್ವಾಂಗದ ವ್ಯವಹಾರಗಳನ್ನು ನಿಯಮಮಾಡುತ್ತಿದೆ. ಈ ಕುಂಡಲಿನೀ ಶಕ್ತಿ ಜಾಗೃತನಾದರೆ ದುಃಖಿಗಳ ನಾಶ, ಸುಖ, ಶಾಂತಿ, ಸಮೃದ್ಧಿ ಮತ್ತು ಸಂತೋಷಗಳು ಲಭ್ಯ.

ಕುಂಡಲಿನೀ ಶಕ್ತಿಯನ್ನು ಪ್ರಜ್ವಲಗೊಳಿಸಿ ಮೂಲಾಧಾರದಿಂದ ಸಹಸ್ರಾರದ ವರೆಗೆ ಎಲ್ಲ ಚಕ್ರಗಳನ್ನು ಹಾಯ್ದು, ನಾಡಿಗಳ ಮೂಲಕ ವಿವಿಧ ಶಕ್ತಿ ಪ್ರಭಾವ ಸಿದ್ಧಿಗಳನ್ನು ಹೊಂದಿ ಸಂಸಿದ್ಧನಾಗುವ ಯೋಗ ಸಾಧಕರಿಗೆ ಸ್ವಾಸ್ಥ್ಯ ರಕ್ಷಣೆ ಅತಿ ಕ್ಷುಲ್ಲಕ ವಿಷಯ. ಅಂತಹ ವ್ಯಕ್ತಿ ನಿರೋಗಿಯೇ ಅಲ್ಲದೆ ಇತರರ ಬಾಧೆಗಳನ್ನೂ ನಿವಾರಿಸಬಲ್ಲ.

ಹೀಗೆ ಆಂತರಿಕ ಶಕ್ತಿ ಕೇಂದ್ರಗಳಾದ ವರ್ಣ, ತತ್ವಾನುಭವದಿಂದ ಸಂಸಿದ್ಧನಾಗುವ ಯೋಗಾಭ್ಯಾಸಿಗೆ ಗುರುವಿನ ಪ್ರೇರಣೆ ಅತ್ಯಗತ್ಯ. ಈ ಗುರುವಿನ ಮಹತ್ವ ಎಷ್ಟೆಂದು ವಿವರಿಸುವಾಗ ಸ್ವಾಮಿ ಮುಕ್ತಾನಂದ ಪರಮಹಂಸರು ತಮ್ಮ ಗುರುಗಳು ಸ್ನಾನ ಮಾಡಿದ ನೀರು ತೀರ್ಥವೆಂದು ಪ್ರಾಶನ ಮಾಡುತ್ತಿದ್ದುದಾಗಿ ಹೇಳಿದ್ದಾರೆ. ಏಕೆಂದರೆ ಅದರಲ್ಲಿ ಚಿತಿಕಿರಣಗಳು ಪಸರಿಸಿರುತ್ತವೆ. ಆ ಕಿರಣಗಳು ತಾಗಿದ ಜನಕ್ಕೆ ದಿವ್ಯಾನುಭೂತಿಯಾಗುತ್ತಿತ್ತು ಎಂದಿರುವರು. ಅಂದರೆ ಗುರುವಿನ ಕೃಪಾಕಟಾಕ್ಷ ಪಡೆದ ವ್ಯಕ್ತಿಗೆ ಏನೆಲ್ಲ ಸಾಧ್ಯವೆಂದು ನಾವು ಊಹಿಸಬಹುದು ಹಾಗೂ ಸಾಧಕ ಶ್ರೇಷ್ಠರಲ್ಲಿ ಹೇಗೆ ಕಿರಣಗಳು ಬಾಹ್ಯದಲ್ಲೂ ಪ್ರಸರಿಸಬಲ್ಲವು ಎಂಬುದು ತಿಳಿದು ಬರುತ್ತ.

ಶಕ್ತಿಯು ಜಾಗೃತವಾದೊಡನೆ ಸ್ಥೂಲ ಶರೀರದಲ್ಲಿ ಅನೇಕ ಕ್ರಿಯೆಗಳಾಗುತ್ತವೆ. ಈ ಕ್ರಿಯೆಗಳು ನಾಡಿಗಳನ್ನು ಶುದ್ಧಿಮಾಡಿ ರೋಗಗಳನ್ನು ನಾಶಮಾಡುತ್ತವೆ. ಸ್ಥೂಲ ಶರೀರದ ಕ್ರಿಯೆಗಳು ಉಳಿದ ಶರೀರಗಳ ಕ್ರಿಯೆಗಳಿಂದ ಭಿನ್ನವಾಗಿವೆ. ಅನಂತ ಪ್ರಕಾರದ ಕ್ರಿಯೆಗಳು ಸಾಧಾರಣವಾಗಿ ಬಹಳ ಕಾಲದವರೆಗೆ ಆಗುತ್ತಿರುತ್ತವೆ. ಧ್ಯಾನದಲ್ಲಿ ರಕ್ತಜ್ಯೋತಿಯ ದರ್ಶನವಾದ ಮೇಲೆ ಪ್ರತಿದಿನ ಅನೇಕ ಪ್ರಕಾರದ ಅನುಭವಗಳು ಆಗುತ್ತವೆ. ಇದರಿಂದ ದಿನ ದಿನಕ್ಕೆ ಮನಸ್ಸಿನ ಏಕಾಗ್ರತೆಯು ಹೆಚ್ಚುತ್ತದೆ ಮತ್ತು ನಾಡಿಗಳು ಶುದ್ಧವಾಗುತ್ತವೆ.

"ನನ್ನ ಗುರುಗಳಾದ ಶ್ರೀ ಬಾಬಾಜರವರ ಕೃಪೆಯಿಂದಾಗಿ ನಾನು ರಕ್ತ, ಶ್ವೇತ ಕೃಷ್ಣ ಮತ್ತು ಪೀತಜ್ಯೋತಿಗಳಿಂದ ಭಿನ್ನವಾದ, ಚಿನ್ಮಯವಾದ, ಸೂಕ್ಷ್ಮವಾದ ದಿವ್ಯ ಆತ್ಮಪ್ರಭೆಯನ್ನು ನೋಡಿದೆನು" ಎಂದಿದ್ದಾರೆ ಶ್ರೀ ತುಕರಾಮ ಮಹಾರಾಜರು. ತಮ್ಮ ಅಭಂಗಗಳಲ್ಲಿ. (ಹೆಚ್ಚಿನ ವಿವರಗಳನ್ನು ಸ್ವಾಮಿ ಮುಕ್ತಾನಂದ ಪರಮಹಂಸರ "ಚಿತ್‌ಶಕ್ತಿ ವಿಲಾಸ" ಗ್ರಂಥದಲ್ಲಿ ನೋಡಬಹುದು.)

ಶರೀರದಲ್ಲಿ ಹೊರಗೂ – ಒಳಗೂ ಕಾಣಲು ಸಾಧ್ಯವಿರುವ ವರ್ಣಗಳು ವಿಕಾರವಾದಾಗ ವ್ಯಕ್ತಿಗಳಲ್ಲ ಅನಾರೋಗ್ಯಕ್ಕೆ ನಾಂದಿಯಾದೀತೆಂದು ಟಿಬೆಟ್ಟಿನ ಯೋಗಾಭ್ಯಾಸಿಯಾದ "ಲೋಬ್‌ಸಾಂಗ್‌ರಂಪ"ನ ಕೃತಿ "ಯೂ ಫಾರ್ ಎವರ್" ಎಂಬುದರಲ್ಲಿ ತಿಳಿದುಬರುತ್ತದೆ. ವರ್ಣರಂಜಿತ ವಾತಾವರಣಗಳಲ್ಲಿ ಜೀವಿಸುವ ವ್ಯಕ್ತಿಗಳ ಮೇಲೆ ಪ್ರತಿವರ್ಣವೂ ದೈಹಿಕಕ್ರಿಯೆ ಮಾನಸಿಕ ಕ್ರಿಯೆಗೂ ಹೆಚ್ಚು ಪ್ರಭಾವಯುತವಾಗಿರುವುದನ್ನು ಆಧುನಿಕ ಮನೋವಿಜ್ಞಾನಿಗಳು ಅರಿತಿದ್ದಾರೆ.

ಉದಾ : ಕೆಂಪು ಬಣ್ಣದ ವಾತಾವರಣದಲ್ಲಿ ಜೀವಿಸಲು ಒಬ್ಬ ವ್ಯಕ್ತಿಯನ್ನು ಬಹಳಕಾಲವಿಟ್ಟರೆ ರಕ್ತದ ಒತ್ತಡ ಹೆಚ್ಚಾಗುವುದೇ ಅಲ್ಲದೆ ಉಸಿರಾಟ ಮತ್ತು ಎದೆಯ ಬಡಿತವೂ ತೀವ್ರತೆ ಹೊಂದುವುದು. ಇದಕ್ಕೆ ಬದಲಾಗಿ ನೀಲವರ್ಣದ ವಾತಾವರಣದಲ್ಲಿ ಬಹುಕಾಲವಿಟ್ಟರೆ ರಕ್ತದ ಒತ್ತಡ ಕಡಿಮೆಯಾಗಿ, ಎದೆಬಡಿತ ಮತ್ತು ಉಸಿರಾಟದ ವೇಗವು ನಿಧಾನತೆಯಾಗುವುದನ್ನು ಪರೀಕ್ಷಿಸಿ ನೋಡಬಹುದು.

## ರೋಗ ನಿವಾರಣೆಗೆ ವರ್ಣ ಚಿಕಿತ್ಸೆ

ಪಾಶ್ಚಾತ್ಯ ವರ್ಣ ವೈದ್ಯ ಪರಿಣಿತರಾದ ಡಾಕ್ಟರ್ ಬಾಬಿಟ್ ಪಾನಕೋಸ್ಟ್, ರೋನಾಲ್ಡ್ ಹಂಟ್ ಮತ್ತಿತರರು ತಮ್ಮ ರೋಗಿಗಳಿಗೆ ವರ್ಣಚಿಕಿತ್ಸೆ ನೀಡಿ ವ್ಯಾಧಿ ನಿವಾರಣೆಯಲ್ಲಿ ವರ್ಣಗಳ ಪಾತ್ರ ಮಹತ್ವವುಳ್ಳದೆಂದು ಮನಗಂಡಿರುವರು. ಇಲ್ಲಿ ಸಂಕ್ಷಿಪ್ತ ವಿವರಣೆಯನ್ನು ಕೊಡಲಾಗಿದೆ. ಹೆಚ್ಚಿನ ವಿವರಣೆ ನಮ್ಮ ಗ್ರಂಥ "ವರ್ಣಗಳ ಪ್ರಭಾವ"ದಲ್ಲಿ ನೋಡುವುದು.)

## ಡಾ|| ಬಾಬಿಟ್‌ರವರ ಚಿಕಿತ್ಸಾ ಕ್ರಮ

**ಕೆಂಪುವರ್ಣ** : ಪಾರ್ಶ್ವವಾಯು, ಕಠಿನತರದ ವಾಯುರೋಗ, ಅತಿಯಾದ ಆಯಾಸ, ಕ್ಷಯ ಗುಣಪಡಿಸಲು ಉಪಯುಕ್ತ.

**ನೀಲವರ್ಣ** : ಗೃಧ್ರಸಿ, ರಕ್ತಸ್ರಾವ, ಮೆದುಳಿನಲ್ಲಿ ರಕ್ತ ಹೆಪ್ಪುಗಟ್ಟುವಿಕೆ, ತಲೆನೋವು, ನರಗಳ ನಿಶ್ಶಕ್ತಿ, ಬಿಸಿಲಿನ ತಾಪಕ್ಕೆ ಈಡಾಗುವುದು, ವಾತ ಶೂಲೆಗಳನ್ನು ಗುಣಪಡಿಸಲು ಉಪಯುಕ್ತ.

**ಹಳದಿ ವರ್ಣ** : ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳು, ಮಲಬದ್ಧತೆ, ರಕ್ತಸ್ರಾವ ಗುಣಪಡಿಸಲು ಉಪಯುಕ್ತ.

ಹಳದಿ ಮತ್ತು ಕಿತ್ತಲೆ ವರ್ಣ ಮಿಶ್ರಣ : ನರಗಳನ್ನು ಉತ್ತೇಜಿಸಲು.

ನೀಲ ಮತ್ತು ನೇರಳೆ ವರ್ಣ ಮಿಶ್ರಣ : ಉರಿ, ಊತ, ನರಗಳಲ್ಲಿ ಚಳುಕು ಇತ್ಯಾದಿ ಗುಣಪಡಿಸಲು.

**ಡಾ|| ರೋನಾಲ್ಡ್ ಹಂಟ್‌ರವರ ಚಿಕಿತ್ಸಾ ಕ್ರಮ**

ರಕ್ತಸ್ರಾವ, ನಿಶ್ಶಕ್ತಿ, ಕೆಂಪುರಕ್ತಗಳ ಕಡಿಮೆಯಾಗಿರುವುದು, ನಿರುತ್ಸಾಹ, ಶೀತ, ಅತಿದ್ರಾವಸ್ಥೆ, ಅತಿಯಾದ ಬೆವರು ಉಂಟಾಗುವಿಕೆ. ಶೀತ ಪ್ರಕೃತಿಯುಳ್ಳ ವ್ಯಕ್ತಿಗೆ, ಮಂದಬುದ್ಧಿಯುಳ್ಳವರಿಗೆ **ಕೆಂಪು ವರ್ಣ ಕಿರಣಗಳಿಂದ** ಗುಣಪಡಿಸಲು ಸಾಧ್ಯವೆಂದಿದ್ದಾರೆ.

ಕಠಿನತರನಾದ ಗೂರಲು, ಕಫಭರಿತ ಜ್ವರ, ದಮ್ಮು ಕೆಮ್ಮು, ಕಠಿನ ವಾತ ರೋಗ, ಮೂತ್ರಜನಕಾಂಗದಲ್ಲಿ ಉರಿ, ಮೂತ್ರಜನಕಾಂಗದಲ್ಲಿ ಕಲ್ಲು. ಸ್ತ್ರೀಯರಲ್ಲಿ ಮಾಸಿಕಋತು ನಿಂತಾಗ ಉಂಟಾಗುವ ಬಾಧೆಗಳು, ಮಾನಸಿಕ ರೋಗಗಳು, ಕಾಲರ, ವಾತರಕ್ತ ಇತ್ಯಾದಿ ರೋಗಗಳನ್ನು ಗುಣಪಡಿಸಲು **ಕಿತ್ತಲೆ ವರ್ಣ ಕಿರಣಗಳು** ಉಪಯುಕ್ತವೆಂದಿದ್ದಾರೆ.

ಉದರ ರೋಗಗಳು, ಅಜೀರ್ಣ, ಮಲಬದ್ಧತೆ, ಜಠರ ವ್ಯಾದಿ, ಕನಿಷ್ಠ, ನರಗಳ ನಿಶ್ಶಕ್ತಿ, ಅರ್ಶರೋಗ, ಇಸಬು, ಕಜ್ಜಿ ಮುಂತಾದ ಚರ್ಮರೋಗ, ಮಾನಸಿಕ ಶಕ್ತಿ ಕುಂದಿರುವುದು, ಕಾಮಾಲೆ ರೋಗಗಳು, ವಾತದಿಂದ ಊದಿದ ರೋಗಗಳ ಚಿಕಿತ್ಸೆಗೆ **ಹಳದಿ ವರ್ಣಕಿರಣಗಳು** ಉಪಯುಕ್ತವೆಂದಿದ್ದಾರೆ.

ಹೃದಯ ರೋಗಗಳು, ರಕ್ತದೊತ್ತಡ, ಜಠರದ ಹುಣ್ಣು, ಅರ್ಬುದರೋಗ, ತಲೆನೋವು, ವಿಷಮಜ್ವರ, ಮೇಹರೋಗ, ಗೂರಲು, ಸುಟ್ಟಗಾಯ, ಹುಣ್ಣು, ಚರ್ಮರೋಗ, ವ್ರಣಗಳ ಮೇಲೆ **ಹಸಿರು ವರ್ಣದ ಕಿರಣಗಳು** ಉತ್ತಮ ಫಲ ನೀಡಿ ಗುಣಪಡಿಸಿರುವುದಾಗಿ ತಿಳಿಸಿರುವರು.

ಗಂಟಲ ವಿವಿಧ ರೋಗಗಳಲ್ಲಿ, ನಾನಾ ವಿಧವಾದ ಜ್ವರಗಳಲ್ಲಿ, ಕಾಲರ, ಪ್ಲೇಗು, ಉನ್ಮಾದ, ಮೂರ್ಛೆ, ವಾತನೋವು, ವಾಕರಿಕೆ, ದಾಹ, ಕಫ, ರಕ್ತಬೇಧಿ, ಅರಿಶಿನ ಕಾಮಾಲೆ, ಪಿತ್ತವಿಕಾರದಿಂದುಂಟಾಗುವ ದೋಷಗಳು, ದಂತದ ನೋವು ಬಾವು, ಹೃದಯದ ಬಡಿತ ಹೆಚ್ಚಾಗಿರುವುದು, ಮಲಾವರೋಧ ಕಣ್ಣುಗಳಲ್ಲಿ ಉರಿ, ಕಜ್ಜಿ, ನರಗಳ ನಿಶ್ಶಕ್ತಿ, ನಿದ್ರಾನಾಶ, ಮಾಸಿಕ ಋತುವೇದನೆ, ಭೀತಿ, ಸಿಡುಬು, ಪಿತ್ತಾಶ್ಮರಿ, ಅತಿಸಾರ ಇತ್ಯಾದಿ ರೋಗಗಳನ್ನು **ನೇರಳೆ ವರ್ಣದ ಕಿರಣಗಳಿಂದ** ಗುಣಪಡಿಸಲು ಸಾಧ್ಯವೆಂದಿದ್ದಾರೆ.

ಮಾನಸಿಕ ರೋಗಗಳು, ನರಗಳ ನಿಶ್ಶಕ್ತಿ, ವಾತಶೂಲೆ, ಗೃಧ್ರಸೀ, ಮೂರ್ಛೆ, ನರಮಂಡಲ ಮತ್ತು ಮೆದುಳಿನ ಪೊರೆಯ ಶೋಧ, ಗ್ರಂಥಿರೋಗಗಳು, ಮೂತ್ರ

ಕೋಶದಲ್ಲಿ ಕಲ್ಲು, ಕೈಕಾಲು ಬಿರುಕು ಬೀಳುವುದು ಇತ್ಯಾದಿ ರೋಗಗಳ ನಿವಾರಣೆಯಲ್ಲಿ ಅತಿ ನೀಲಬಣ್ಣದ ಕಿರಣಗಳು ಉಪಯುಕ್ತವೆಂದಿದ್ದಾರೆ.

ಈ ಮೇಲಿನ ವಿವರಣೆಗಳಿಂದ ವರ್ಣಭರಿತ ಶರೀರದಲ್ಲಿ ಯಾವುದೇ ವರ್ಣದ ಕೃಷೆಯಿದ್ದಾಗ ರೋಗ ಉಂಟಾಗುವುದೆಂದು, ಅಂತಹ ವರ್ಣದ ಕಿರಣಗಳ ಪ್ರಯೋಗ ದಿಂದ ರೋಗ ವಿಮುಕ್ತಿಗೆ ಸಾಧ್ಯವೆಂದು ತಿಳಿದಂತಾಯ್ತು.

ತ್ರಿಮುಖಿ ಗಾಜನಿಂದ (Prism) ಒಬ್ಬ ಆರೋಗ್ಯವಂತ ವ್ಯಕ್ತಿಯನ್ನು ಗಮನಿಸಿದರೆ ಅವನ ಕಿವಿಗಳು ನೀಲ, ಚರ್ಮ ನೇರಳೆ ಬಣ್ಣ, ಕಣ್ಣುಗಳು ಕೆಂಪು, ನಾಲಿಗೆ ಕಿತ್ತಲೆ ವರ್ಣ ಮತ್ತು ಮೂಗಿನ ತುದಿ ಹಸಿರು ವರ್ಣವಿರುವುದು ಕಂಡು ಬರುತ್ತೆ.

ಇವುಗಳಲ್ಲಿ ಯಾವುದೇ ವ್ಯತ್ಯಾಸ ಅಥವ ವರ್ಣಹೀನವಿದ್ದಲ್ಲಿ ಅನಾರೋಗ್ಯವಂತ ಎಂದು ನಿರ್ಧರಿಸಬಹುದು. ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ಇವುಗಳು ಪಂಚ ಜ್ಞಾನೇಂದ್ರಿಯಗಳು. ಇವುಗಳು ಪೃಥ್ವಿ, ಜಲ, ವಾಯು, ಅಗ್ನಿ ಮತ್ತು ಆಕಾಶ ಎಂಬ ಪಂಚ ತತ್ವಗಳಿಗೆ ಸಂಬಂಧಿಸಿದ್ದು.

ಪಂಚ ತತ್ವಗಳಿಗೂ, ನವಗ್ರಹಗಳಿಗೂ ಮತ್ತು ಅವುಗಳು ಪ್ರಭಾವ ಹೊಂದಿರುವ ದ್ವಾದಶ ರಾಶಿಗಳಿಗೂ ಇರುವ ಸಂಬಂಧವನ್ನು ವೇದಾಂಗ ಜೋತಿಶ್ಯಾಸ್ತ್ರ ನಿರೂಪಿಸಿದೆ. ಈ ಎಲ್ಲ ವರ್ಣಗಳನ್ನೂ ನಮ್ಮ ಅವಶ್ಯಕತೆಗೆ ತಕ್ಕಂತೆ ಪಡೆಯಲು ಅತಿ ಸುಲಭ ಮಾರ್ಗ ರತ್ನಗಳು. ರತ್ನಗಳ ವರ್ಣವನ್ನು ಹಿಂದಿನ ಪುಟಗಳಲ್ಲಿ ತಿಳಿಸಿದ್ದೇವೆ. ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

1. ಮಾಣಿಕ್ಯ—ರಕ್ತವರ್ಣ
2. ಮುತ್ತು—ಬಿಳಿಮಿಶ್ರಿತ ಕೆಂಪು
3. ಹವಳ—ಗುಲಾಬಿ ಕೆಂಪು ಅಥವಾ ರಕ್ತ ಕೆಂಪು
4. ಪಚ್ಚೆ—ಹಸಿರು
5. ಪುಷ್ಪರಾಗ—ಹಳದಿ ಬಿಳಿ ಮಿಶ್ರವರ್ಣ
6. ವಜ್ರ—ಬಿಳುಪು (ತಿಳಿನೀಲ ಮಿಶ್ರ ಬಿಳುಪು)
7. ನೀಲ—ನೀಲಿ ಬಣ್ಣ
8. ಗೋಮೇಧಿಕಾ—ಜೇನುತುಪ್ಪದ ಬಣ್ಣ
9. ವೈಡೂರ್ಯ—ಹಾಲಿನ ವರ್ಣ, ನಾನಾವರ್ಣದ್ದು

(ರಾಶಿಗಳ ವರ್ಣ ವಿವರಣೆಯನ್ನು ಹಿಂದಿನ ಅಧ್ಯಾಯಗಳಲ್ಲಿ ಕಾಣಬಹುದು.)

**ನವಗ್ರಹಗಳ ವರ್ಣ, ತತ್ವ, ಗುಣ, ಸಂಬಂಧಿಸಿದ ರತ್ನ, ಪ್ರಕೃತಿ ನಮ್ಮ ಶರೀರದ ಯಾವ ಅವಯವದ ಮೇಲಿನ ಅಧಿಕಾರವೆಂದು ತಿಳಿಸುವ ಪಟ್ಟಿ.**

| ಗ್ರಹ | ವರ್ಣ | ತತ್ವ | ಗುಣ | ಸಂಬಂಧಿಸಿದ ರತ್ನ | ಪ್ರಕೃತಿ | ಶರೀರದ ಅವಯವದ ಮೇಲಿನ ಅಧಿಕಾರ |
|---|---|---|---|---|---|---|
| ರವಿ | ಕೇಸರಿ | ಅಗ್ನಿ | ಸಾತ್ವಿಕ | ಮಾಣಿಕ್ಯ | ಪಿತ್ತ | ಮೂಳೆ |
| ಚಂದ್ರ | ಬಿಳುಪು | ಜಲ | ಸಾತ್ವಿಕ | ಮುತ್ತು | ಶ್ಲೇಷ್ಮ | ರಕ್ತ |
| ಕುಜ | ರಕ್ತಕೆಂಪು | ಅಗ್ನಿ | ತಮೋ | ಹವಳ | ಪಿತ್ತ | ಮಜ್ಜ,ಮಾಂಸ |
| ಬುಧ | ಹಸಿರು | ಭೂ | ರಜೋ | ಪಚ್ಚೆ | ತ್ರಿದೋಷ | ಚರ್ಮ |
| ಗುರು | ಹಳದಿ | ಆಕಾಶ | ದೈವ | ಪುಷ್ಪರಾಗ | ಶ್ಲೇಷ್ಮ | ಕೊಬ್ಬು |
| ಶುಕ್ರ | ಬಿಳಿಪು | ಜಲ | ತಜೋ | ವಜ್ರ | ಶ್ಲೇಷ್ಮ | ವೀರ್ಯ |
| ಶನಿ | ನೀಲ | ವಾಯು | ತಮೋ | ಇಂದ್ರನೀಲ | ವಾತ | ನರಗಳು |
| ರಾಹು | ಕಪ್ಪು | — | ತಮೋ | ಗೋಮೇಧಿಕಾ | ವಾಯು | — |
| ಕೇತು | ಮಿಶ್ರ | — | ತಮೋ | ವೈಢೂರ್ಯ | ವಾಯು | — |

ಈ ಮೇಲಿನ ಪಟ್ಟಿಯಿಂದ ಜ್ಯೋತಿಶ್ಯಾಸ್ತ್ರದಲ್ಲಿ ಗ್ರಹಗಳ ವರ್ಣಕ್ಕೂ ಅದಕ್ಕೆ ಸಂಬಂಧಿಸಿದ ರತ್ನಗಳ ವರ್ಣಕ್ಕೂ ಏಕಸಾಮ್ಯತೆ ಇರುವುದು ತಿಳಿದಿರುವಿರಿ. ಹಾಗೂ ಪಂಚ ತತ್ವಗಳಿಗೂ-ಗ್ರಹಗಳಿಗೂ ಸಂಬಂಧ ಇರುವುದನ್ನೇ ತಿಳಿದಿರುವಿರಿ. ಹೀಗೆಯೇ ರತ್ನ ವರ್ಣಗಳಿಗೂ – ಶರೀರ ವರ್ಣಗಳಿಗೂ ಕಿರಣ ಸಂಬಂಧವಿರುವುದನ್ನು ತಿಳಿದಿರುವಿರಿ. ಈ ಕಿರಣಗಳ ಅಸಮ್ಮತಿ ರೋಗಕ್ಕೆ ನಾಂದಿ. ಕಿರಣಗಳ ಸಮಸ್ಥಿತಿ ಆರೋಗ್ಯವಂತನಲ್ಲಿ ಕಾಣಬಹುದು.

## ನವರತ್ನಗಳ ಹೆಸರು-ವಿವಿಧ ಭಾಷೆಗಳಲ್ಲಿ – 15

**ಮಾಣಿಕ್ಯ** : ಸಂಸ್ಕೃತ ಮಾಣಿಕ್ಯ, ಪದ್ಮರಾಗ, ಲೋಹಿತ, ಶೋಣರತ್ನ, ರವಿರತ್ನ, ಶೋಣಫಲ, ಕುರವಿಂದ, ಸೌಗಂಧಿಕ, ವಸುರತ್ನ ; ಹಿಂದಿ–ಚುನ್ನೀ, ತೆಲಗು – ಮಾಣಿಕ್ಯಮು, ಪದ್ಮರಾಗಮು ; ಉರ್ದು ಮತ್ತು ಪಾರ್ಸಿಯಾಕೂತ, ಇಂಗ್ಲೀಷ್–ರೂಬಿ ; ಕನ್ನಡ-ಮಾಣಿಕ್ಯ, ಪದ್ಮರಾಗ.

**ಮುತ್ತು** : ಸಂಸ್ಕೃತ-ಮುಕ್ತಾ, ಮೌಕ್ತಿಕ, ಶುಕ್ತಿಜ, ಇಂದುರತ್ನ, ಹಿಂದಿ-ಮೋತಿ ; ಉರ್ದು ಮತ್ತು ಪಾಸಿ - ಮರವಾರೀದ್ ; ತೆಲುಗು-ಮುತ್ಯಮು, ಇಂಗ್ಲೀಷ್-ಪರ್ಲ್ ; ಕನ್ನಡ-ಮುತ್ತು.

**ಹವಳ** : ಸಂಸ್ಕೃತ-ಪ್ರವಾಳ, ವಿದ್ರುಮ, ಲತಾಮಣಿ, ಅಂಕಾರಕಮಣಿ, ಭೌಮರತ್ನ, ರಕ್ತಾಂಗ, ಅಂಬೋಧಿ ಪಲ್ಲವ ; ಹಿಂದಿ-ಮೂಂಗ ; ತೆಲುಗು-ಪಗಡಮು: ಉರ್ದು ಮತ್ತು ಪಾರ್ಸಿ-ಮಿರಜ್ಞಾ ; ಇಂಗ್ಲೀಷ್-ಕೊರಾಲ್ ; ಕನ್ನಡ-ಹವಳ.

**ಪಚ್ಚೆ** : ಸಂಸ್ಕೃತ-ಮರಕತ, ಗುರುತ್ಮಕ, ಹರಿತ್ಮಕ ಪಾಚಿ, ಹರಿನ್ಮಣಿ, ಗರುಡಾಂಕಿತ, ಗರುಡೋದ್ಗೀರ್ಣ, ಸೌಪರ್ಣ, ಅಶ್ವಗರ್ಭಾ, ಗರಲಾರಿ, ಹಿಂದಿ-ಪನ್ನಾ, ತೆಲುಗು-ಗರುಡಪಚ್ಚಾ, ಪಚ್ಚರಾಯಿ, ಮರಕತಮಣಿ, ಉರ್ದು ಮತ್ತು ಪಾರ್ಸಿ - ಜಮರುದ್, ಇಂಗ್ಲೀಷ್ - ಎಮರಾಲ್ಡ್, ಕನ್ನಡ - ಪಚ್ಚೆಕಲ್ಲು, ಗರುಡಪಚ್ಚೆ, ಪಚ್ಚೆ.

**ಪುಷ್ಪರಾಗ** : ಸಂಸ್ಕೃತ-ಪುಷ್ಪರಾಗ, ಪೀತಸ್ಫಟಿಕ, ಪೀತಮಣಿ, ಜೀವರತ್ನ, ಹಿಂದಿ-ಪುಖರಾಜ್, ತೆಲುಕು-ಪುಷ್ಪರಾಗಮು, ಪುಷ್ಯರಾಗಮು, ಉರ್ದು ಮತ್ತು ಪಾರ್ಸಿ-ಪುಖ್‌ರಾಜ್, ಇಂಗ್ಲೀಷ್-ಟೋಪಾಸ್, ಕನ್ನಡ-ಪುಷ್ಪರಾಗ, ಪುಷ್ಯರಾಗ.

**ವಜ್ರ** : ಸಂಸ್ಕೃತ-ವಜ್ರ, ವಿದ್ಯುತ್, ಆರ್ಕ, ಶತಕೋಟಿ, ವಿಧುರ, ಅಭೇದ್ಯ, ಹೀರಕ, ಸಾಯಕ, ಕುರಿಶ, ಹಿಂದಿ-ಹೀರಾ, ತೆಲುಗು-ವಜ್ರಮು, ಉರ್ದು ಮತ್ತು ಪಾರ್ಸಿ-ಆಲ್ಮಾಸ್, ಇಂಗ್ಲೀಷ್-ಡೈಮಂಡ್, ಕನ್ನಡ-ವಜ್ರ.

**ನೀಲ** : ಸಂಸ್ಕೃತ-ನೀಲ, ಶೌರಿರತ್ನ, ಇಂದ್ರನೀಲ, ತೃಣಗ್ರಾಹಿ, ನೀಲಮಣಿ, ಹಿಂದಿ-ನೀಲಮ್, ಉರ್ದು ಮತ್ತು ಪಾರ್ಸಿ-ನೀಲಮ್, ತೆಲುಗು-ನೀಲಮು, ಇಂದ್ರ ನೀಲಮಣಿ, ಇಂಗ್ಲೀಷ್-ಸಫೈರ್, ಕನ್ನಡ-ನೀಲ, ಇಂದ್ರನೀಲ, ನೀಲಮಣಿ.

**ಗೋಮೇಧಿಕಾ** : ಸಂಸ್ಕೃತ - ಗೋಮೇಧ, ಪಿಂಗಸ್ಫಟಿಕ, ರಾಹುರತ್ನ, ಹಿಂದಿ-ಗೋಮೇದ್, ಉರ್ದು ಮತ್ತು ಪಾರ್ಸಿ - ಜರಕೂನಿಯಾ, ಜಾರಗುನ್, ತೆಲುಗು-ಗೋಮೇಧಿಕಮು, ಇಂಗ್ಲೀಷ್-ಜರಕಾನ್, ಕನ್ನಡ-ಗೋಮೇಧಿಕಾ.

**ವೈಢೂರ್ಯ** : ಸಂಸ್ಕೃತ-ವೈಢೂರ್ಯ, ಬಿಡಲಾಕ್ಷ, ಅಭರೋಹ, ರಾಪ್ಪುತ, ಬಾಲಸೂರ್ಯ, ವಿಧುರರತ್ನ ಮೇಘ ಖರಾಕುರ, ಹಿಂದಿ-ಲಂಬಸಾನಿಯಾ, ಉರ್ದು ಮತ್ತು ಪಾರ್ಸಿ-ಲಹಸಾನಿಯಾ, ತೆಲುಗು-ವೈಢೂರ್ಯ, ಇಂಗ್ಲೀಷ್-ಕ್ಯಾಟ್ಸ್ ಐ, ಕನ್ನಡ-ವೈಢೂರ್ಯ.

ಪ್ರತಿಯೊಬ್ಬ ವ್ಯಕ್ತಿಯ ಭವಿಷ್ಯ ತಿಳಿಯಲು ಜಾತಕ ಅಗತ್ಯ. ಜಾತಕವೆಂದರೆ ಜನನ ತಾರೀಖು, ಜನನ ಕಾಲ, ಜನ್ಮಸ್ಥಳ ಆಧಾರಿತವಾಗಿ ಗ್ರಹಗಳಿರುವ ರಾಶಿ ಯಾವುದು ಮತ್ತು ಆ ಸಮಯಕ್ಕೆ ಉದಯಿಸುತ್ತಿರುವ ಲಗ್ನ ಯಾವುದೆಂದು ತಿಳಿಸುವುದು. ಲಗ್ನವನ್ನೇ ಮೊದಲನೆ ಸ್ಥಾನವನ್ನಾಗಿಟ್ಟುಕೊಂಡು (ತನುಭಾವವೆಂದೂ ಕರೆಯುವರು). ಹನ್ನೆರಡು ಮನೆಗಳಿಂದ ಮಾನವರ ಪೂರ್ವಾಪರಗಳನ್ನು ನಿರ್ಧರಿಸುವರು. ಈ ಲಗ್ನದಿಂದ 5ನೇ ಸ್ಥಾನ, ಪೂರ್ವಪುಣ್ಯ ಸ್ಥಾನವೆಂದೂ, 9ನೇ ಸ್ಥಾನ ಈ ಜನ್ಮದಲ್ಲಿ ಅನುಭವಿಸಲಿರುವ ಭಾಗ್ಯಸ್ಥಾನವೆಂದೂ ಹೇಳಿರುವರು. ಅಂದರೆ ಹಿಂದಿನ ಜನ್ಮದ ಸುಕೃತದಿಂದ ಈ ಜನ್ಮದಲ್ಲಿ ಭಾಗ್ಯ ಅನುಭವಿಸುವರೆಂದು ತಿಳಿಸುವ ಲಗ್ನ, 5–9 ಸ್ಥಾನಗಳು ಅತಿಮುಖ್ಯ. ಉಳಿದ ಸ್ಥಾನಗಳಲ್ಲಿ 6-8-12 ಸ್ಥಾನಗಳು ಪಾಪಸ್ಥಾನಗಳು. ಈ ಸ್ಥಾನಗಳ ಮತ್ತು ಅವುಗಳ ಅಧಿಪತಿಗಳ ಪ್ರಭಾವ ವಿಪರೀತ ವಾಗಿದ್ದು ಲಗ್ನ 5-9 ಸ್ಥಾನಗಳು ಅಶಕ್ತವಾಗಿದ್ದಲ್ಲಿ ಜಾತಕವು ರೋಗ, ಋಣ, ರುಜಿನ, ಶತೃತ್ವ, ನಷ್ಟ ಇತ್ಯಾದಿ ಅಶುಭ ಫಲಗಳಿಗೆ ಈಡಾಗುವುದು. ಅಂದರೆ ಲಗ್ನಾದಿ ಹನ್ನೆರಡು ಸ್ಥಾನಗಳಿಂದ ಜೀವನದ ಸಮಸ್ತ ವಿಚಾರಗಳನ್ನು ತಿಳಿಯ ಬಹುದು. ಅದು ಯಾವುದು ?

**ಲಗ್ನದಿಂದ** : ದೇಹಸ್ಥಿತಿ, ಶಿರಸ್ಸು, ಜ್ಞಾನ, ಕರ್ಮೇಂದ್ರಿಯಗಳು ಹೊಟ್ಟೆ, ಕೀರ್ತಿ, ಶುಭ, ಸಂತೋಷ, ದುಃಖ, ವರ್ತಮಾನ, ವಯಸ್ಸು, ಉದ್ದಿಶ್ಯ, ಭಕ್ತಿ, ಗುಣ, ನಡತೆ, ಜನ್ಮಸ್ಥಿತಿ, ದೇಶಾಂತರ ಗಮನ, ಅಭಿಮಾನ, ಸಮ್ಮಾನ ಇತ್ಯಾದಿ ವಿಚಾರಗಳನ್ನು ತಿಳಿಯಬಹುದು.

**2ನೇ ಭಾವದಿಂದ :** ವಾಕ್, ಕುಟುಂಬ, ನೇತ್ರ, ಮೂಗು, ದ್ರವ್ಯ ಸಂಗ್ರಹಣೆ, ಮುಖ, ವಿದ್ಯೆ, ಆಭರಣ, ರತ್ನ, ಶಾಸ್ತ್ರಜ್ಞಾನ ಇತ್ಯಾದಿಗಳನ್ನು ತಿಳಿಯಬಹುದು.

**3ನೇ ಭಾವದಿಂದ :** ವೀರ್ಯ, ಧೈರ್ಯ, ಸಂಪರ್ಕ, ಸಹೋದರ, ಕಿವಿ, ಕಿವಿಯ ಆಭರಣ, ಜಯ, ಭೋಜನ ಪಾತ್ರೆ, ಹಾಡುವಿಕೆ ಇತ್ಯಾದಿಗಳನ್ನು ತಿಳಿಯಬಹುದು.

**4ನೇ ಭಾವದಿಂದ** : ಮಾತೃವಿನ ವಿಚಾರ, ಸ್ವಂತ ಸುಖ, ಭೂಮಿ, ವಾಹನ, ಉನ್ನತ ವಿದ್ಯೆ, ಗೃಹ, ನಿಕ್ಷೇಪ, ಕೆರೆ, ತೋಟ, ಉದ್ಯಾನ, ಕೃಷಿ, ಶೃಂಗಾರ, ವಾದ್ಯ, ಪಶುಗಳು, ಬಂಧುವರ್ಗ ಇತ್ಯಾದಿ ವಿಚಾರಗಳನ್ನರಿಯಬಹುದು.

**5ನೇ ಭಾವದಿಂದ :** ಪೂರ್ವಜನ್ಮದ ಪುಣ್ಯ, ಸಂತಾನ, ದೇವತೋಪಾಸನೆ, ಮಂತ್ರವಿದ್ಯೆ, ಬುದ್ಧಿ, ತಂದೆಯ ತಂದೆ (ತಾತ), ಗರ್ಭವಿಚಾರ, ಯೋಗಸಿದ್ಧಿ, ರಾಜಸನ್ಮಾನ, ಕವಿತಾಶಕ್ತಿ, ವಂಶ, ರಾಜ್ಯಾಧಿಕಾರ ಇತ್ಯಾದಿಗಳನ್ನು ತಿಳಿಯಬಹುದು.

**6ನೇ ಭಾವದಿಂದ :** ರೋಗಗಳು, ಶತ್ರುಗಳು, ದಾಯಾದಿಗಳು, ವ್ರಣಗಳು, ಶಸ್ತ್ರಭಯ, ಚೋರಭಯ, ಗಂಡಗಳು, ವಂಚನೆ, ದುರ್ಭೋಜನ, ವ್ಯಸನ, ಸಾಲ, ಗುಪ್ತರೋಗ, ವಿಷಬಾಧೆ, ಕಾರಾಗೃಹವಾಸ, ಜಲಗಂಡ ಇತ್ಯಾದಿಗಳನ್ನು ತಿಳಿಯಬಹುದು.

**7ನೇ ಭಾವದಿಂದ :** ಕಳತ್ರಸೌಖ್ಯ, ವಿವಾಹ, ಪಾಲುಗಾರಿಕೆ ವ್ಯವಹಾರ, ಮರಣಕ್ಕೆ ಕಾರಣ, ಪುತ್ರವಿರೋಧ, ಕಾಮ, ವ್ಯಭಿಚಾರ, ಸರಸ ಸಲ್ಲಾಪ, ಸತಿ ಇಲ್ಲವೇ ಪತಿಯ ಗುಣ, ನವರಸ, ದೂರ ಪ್ರಯಾಣ ಇತ್ಯಾದಿಗಳನ್ನು ತಿಳಿಯಬಹುದು.

**8ನೇ ಭಾವದಿಂದ :** ಆಯುಷ್ಯ, ಮೃತ್ಯು, ಗಂಡಾಂತರಗಳು, ಆಕಸ್ಮಿಕ ಧನ, ಗುಪ್ತಧನ, ದೀರ್ಘರೋಗಗಳು, ಅಂಗಹೀನತ್ವ, ವಿಷಭಕ್ಷಣೆ, ಹೆದರಿಕೆ, ಯುದ್ಧದಲ್ಲಿ ಮರಣ, ಅಪಜಯ, ಕಾರಾಗೃಹ ಪ್ರವೇಶ, ನಿಧಿ, ವಿಪರೀತವಾದ ಕ್ಲೇಶ, ಎತ್ತರದಿಂದ ಬಿದ್ದು ಮೃತ್ಯು, ಮರಣ ಕಾಲದಲ್ಲಿ ಅಜ್ಞಾನದ ಅವಧಿ, ಮರಣಕ್ಕೆ ಕಾರಣ ಇತ್ಯಾದಿಗಳನ್ನು ತಿಳಿಯಲು ಸಾಧ್ಯ.

**9ನೇ ಭಾವದಿಂದ :** ಪಿತೃಭಾಗ್ಯ, ಧರ್ಮಕಾರ್ಯ, ವಾಹನಾದಿ ಭಾಗ್ಯ, ತೀರ್ಥಯಾತ್ರೆ, ಮಠ, ಛತ್ರ, ಶಾಲೆ, ಆಸ್ಪತ್ರೆ ಇತ್ಯಾದಿಗಳ ನಿರ್ಮಾಣ, ವಿದೇಶ ಪ್ರವಾಸ, ಸಾಧುಸಂತರ ಸೇವೆ, ಉಪದೇಶ, ಆಧ್ಯಾತ್ಮ ಅನುಭವ, ಜಪ ತಪಸ್ಸು, ಭಕ್ತಿ, ಅಧಿಕವಾದ ಭೂಷಣ, ಆಭರಣಾದಿಗಳು ಇತ್ಯಾದಿ ವಿಚಾರಗಳನ್ನು ತಿಳಿಯಲು ಸಾಧ್ಯ.

**10ನೇ ಭಾವದಿಂದ :** ಉದ್ಯೋಗ, ಕೀರ್ತಿ, ಯಶಸ್ಸು, ಕರ್ಮ ಮಾಡುವಿಕೆ, ಮಾನ, ತೀರ್ಥಕ್ಷೇತ್ರಗಳಲ್ಲಿ ಸ್ನಾನ, ರಾಜ್ಯ, ಪಟ್ಟ, ನಿಧಿ, ಗ್ರಾಮ, ನಿಕ್ಷೇಪ, ಪದವಿ, ಪ್ರತಿಷ್ಠೆಗಳ ವಿಚಾರ ತಿಳಿಯಬಹುದು.

**11ನೇ ಭಾವದಿಂದ :** ಇಷ್ಟಾರ್ಥಸಿದ್ಧಿ, ಹಿರಿಯ ಸೋದರ ವರ್ಗ, ನಾನಾ ಮೂಲಕ ಲಾಭ, ಐಶ್ವರ್ಯ, ಪರಸ್ತ್ರೀ ಸಂಭೋಗ, ನಟನೆ, ನಾಟಕ, ಸಂಗೀತ, ವ್ಯಾಪಾರ, ಜಲದ ಮೇಲೆ ಪ್ರಯಾಣ ಇತ್ಯಾದಿ ವಿಚಾರಗಳ ಬಗ್ಗೆ ತಿಳಿಯಲು ಸಾಧ್ಯ.

**12ನೇ ಭಾವದಿಂದ :** ಬೆಟ್ಟ ಗುಡ್ಡಗಳಲ್ಲಿ ಸಂಚಾರ, ಧನವ್ಯಯ, ಪರದೇಶ ಪ್ರವಾಸ, ಶಯನಸೌಖ್ಯ, ಭೋಗ ಸುಖ, ಮುಂದಿನ ಜನ್ಮದ ವಿಚಾರ, ರಾಜದಂಡನೆ, ತೆರಿಗೆ, ವಿವಾದ, ಹಡಗಿನ ವ್ಯಾಪಾರ, ಈ ಜನ್ಮದಲ್ಲಿ ಮಾಡುವ ಪಾಪಪುಣ್ಯಗಳು ನೇತ್ರ ಭೀತಿ, ತ್ಯಾಗ, ನಾನಾ ರೀತಿಯ ನಷ್ಟ, ಜೈಲುವಾಸ ಇತ್ಯಾದಿ ವಿಚಾರಗಳನ್ನು ತಿಳಿಯಲು ಸಾಧ್ಯ.

ಲಗ್ನಾತ್ 6, 8, 12 ಈ ಸ್ಥಾನಗಳ ಅಥವಾ ಈ ಸ್ಥಾನಾಧಿಪತಿಗಳ ಸಂಬಂಧ ಇತರ ಭಾವಾಧಿಪತಿಗಳಿಗೆ ಮತ್ತು ಭಾವಗಳಿಗೆ ಇಲ್ಲವಾದರೆ ಪ್ರತಿಯೊಬ್ಬ ಜಾತಕನೂ ಈ ಪ್ರಪಂಚದ ಸಮಸ್ತ ಸುಖವನ್ನೂ ದೀರ್ಘಕಾಲದವರೆಗೆ ಅನುಭವಿಸಿ, ಸಕಲ ಸಿದ್ಧಿ ಪಡೆದು, ಮೋಕ್ಷವನ್ನು ಪಡೆಯಬಹುದೆಂದು ಜ್ಯೋತಿಶಾಸ್ತ್ರ ಗ್ರಂಥಗಳು ತಿಳಿಸುವುದು ಹಾಗೆ ಯಾವ ಜಾತಕನು ಜನಿಸಿಲ್ಲ. ಕರ್ಮವಿಮುಕ್ತನಾಗಲು ಸಾಧ್ಯವಾಗಿಲ್ಲ. ರೋಗ, ಋಣ, ರುಜಿನ ಶತ್ರುತ್ವಗಳು, ಅನೇಕ ಕಷ್ಟ ಕಾರ್ಪಣ್ಯಗಳು, ಜನ್ಮಜನ್ಮಾಂತರಗಳಿಂದ ಅನುಭವಿಸುತ್ತಲಿದ್ದೇವೆ. ಇವುಗಳನ್ನು ಸೂಚಿಸುವುದು ನಮ್ಮ ಜಾತಕ, ಜಾತಕದ ಗ್ರಹಗಳು, ದ್ವಾದಶ ಭಾವಗಳು. ಹಾಗೆ ಉಂಟಾಗುವ ಕಷ್ಟಗಳ ಪರಿಹಾರಕ್ಕೆ ಗ್ರಹಶಾಂತಿ ಅಗತ್ಯ. ಆದರಿಂದ ಅನೇಕ ಕಷ್ಟಗಳನ್ನು, ಕಂಟಕಗಳನ್ನು ನಿವಾರಿಸಿ ಕೊಳ್ಳಬಹುದು. ಶುಭ ಫಲಗಳನ್ನು ಪಡೆಯಬಹುದು. ಅಂತಹ ಶಾಂತಿ ಕ್ರಮಗಳಲ್ಲೊಂದು ನವರತ್ನದ ಅಂಗುಳ್ಯಾಭರಣ ಧಾರಣೆ.

ಗ್ರಹಮಂಡಲದ ಆಕಾರ

| | | |
|---|---|---|
| ಬುಧ | ಶುಕ್ರ | ಚಂದ್ರ |
| ಗುರು | ರವಿ | ಕುಜ |
| ಕೇತು | ಶನಿ | ರಾಹು |

ನವರತ್ನದುಂಗುರದ ಆಕಾರ

| | | |
|---|---|---|
| ಪಚ್ಚೆ | ವಜ್ರ | ಮುತ್ತು |
| ಪುಷ್ಪರಾಗ | ಮಾಣಿಕ್ಯ | ಹವಳ |
| ವೈಢೂರ್ಯ | ನೀಲ | ಗೋಮೇಧಿಕ |

**ಶ್ಲೋಕ** ॥ ಸೂರ್ಯ ದೀನಾಂತು ಸಂತುಷ್ಟ್ಯೆ ಮಾಣಿಕ್ಯಂ ಮೌಕ್ತಿಕಂತಥಾ ।
ಸುವಿದ್ರುಮಂ ಮರಕ ತಂಚಿ ಪುಷ್ಪರಾಗಂ ವಜ್ರಕಂ ।
ನೀಲಗೋಮೇಧ ವೈಢೂರ್ಯಂ ಧಾರ್ಯಂಸ್ವಸ್ವ ದೃಥಕ್ರವಮಾತ್ ॥

**ಅರ್ಥ** : ರವ್ಯಾದಿ ಗ್ರಹಗಳು ಜಾತಕ ರೀತಿಯಲ್ಲಾಗಲೀ, ಗೋಚರ ರೀತಿಯಲ್ಲಾಗಲೀ ದುಷ್ಟಸ್ಥಾನಗಳಲ್ಲಿದ್ದು ಕಷ್ಟಗಳನ್ನು ಉಂಟುಮಾಡುತ್ತಿದ್ದಲ್ಲಿ ತಚ್ಛಾಂತಿಗಾಗಿ ರವಿಗೆ-ಮಾಣಿಕ್ಯವನ್ನು, ಚಂದ್ರನಿಗೆ-ಮುತ್ತನ್ನು, ಕುಜನಿಗೆ-ಹವಳವನ್ನು ಬುಧನಿಗೆ-ಪಚ್ಚೆಯನ್ನು, ಗುರುವಿಗೆ-ಪುಷ್ಪರಾಗವನ್ನು, ಶುಕ್ರನಿಗೆ-ವಜ್ರವನ್ನು, ಶನಿಗೆ-ನೀಲವನ್ನು, ರಾಹುವಿಗೆ-ಗೋಮೇಧಿಕವನ್ನು ಮತ್ತು ಕೇತುವಿಗೆ-ವೈಢೂರ್ಯವನ್ನು ಧರಿಸಬೇಕೆಂದು ಮಹರ್ಷಿ ಕಾಶ್ಯಪರು ನುಡಿದಿರುವರು. ರತ್ನಗಳೊಂಭತ್ತನ್ನೂ ಒಂದೇ ಉಂಗುರದಲ್ಲಿ ಸ್ಥಿತಿಪಡಿಸಿ ಧರಿಸಬೇಕಾದವರು ಈ ಮೇಲೆ ತಿಳಿಸಿದ ಆಕಾರದಲ್ಲಿ ರತ್ನಗಳನ್ನು ಖಚಿತಪಡಿಸಿ ಧರಿಸಬೇಕು. ರತ್ನಗಳನ್ನು ವೃತ್ತಾಕಾರದಲ್ಲಿ ಇಲ್ಲವೇ ಚೌಕ ಆಕಾರದಲ್ಲಿಯಾಗಲಿ ತಮಗೆ ಇಷ್ಟವಾಗುವ ಆಕಾರದಲ್ಲಿ ಮಾಡಿಸಿ ಧರಿಸಿಕೊಳ್ಳಬಹುದು.

## ನವರತ್ನಖಚಿತವಾದ ಅಂಗುಳ್ಯಾಭರಣದಿಂದ ಗ್ರಹಶಾಂತಿ

(ನವಗ್ರಹಶಾಂತಿಗೆ ಸಂಬಂಧಿಸಿದ ಗ್ರಂಥವೊಂದರ ಆಧಾರ)

ನವಗ್ರಹಗಳು ಮೇಲೆ ತಿಳಿಸಿರುವ ಭಾವಗಳಲ್ಲಿ ದುಷ್ಪರಿಣಾಮಗಳನ್ನು ಉಂಟುಮಾಡುತ್ತಿರುವಾಗ ಇಲ್ಲವೇ ಗೋಚಾರರೀತ್ಯ ದುಷ್ಟ ಸ್ಥಾನಗಳಲ್ಲಿ ಸಂಚರಿಸಿ ನಾನಾ ಕಷ್ಟಗಳನ್ನುಂಟುಮಾಡುತ್ತಿರುವಾಗ ನವಗ್ರಹಶಾಂತಿ ಕ್ರಮ ವೈದಿಕ ಗ್ರಂಥಗಳಲ್ಲಿ ಸೂಚಿಸಲ್ಪಟ್ಟಿದೆ. ಈ ಕ್ರಮಗಳಲ್ಲೊಂದಾದ "ನವರತ್ನ ಅಂಗುಳ್ಯಾಭರಣ" ಧಾರಣೆಯೂ ಬಹಳ ಕಾಲದಿಂದಲೂ ಅನುಸರಿಸಲ್ಪಡುತ್ತಾ ಬಂದಿದೆ. (ಹಿಂದಿನ ಪುಟದಲ್ಲಿ ತೋರಿಸಿರುವ ಗ್ರಹಮಂಡಲದ ಆಕಾರ ಮತ್ತು ಆದಕ್ಕೆ ಸಂಬಂಧಿಸಿದ ನವರತ್ನ ಮಂಡಲದ ಆಕಾರ ಚಿತ್ರವನ್ನು ನೋಡಿ ನವರತ್ನ ಮಂಡಲದ ಆಕಾರ ಚಿತ್ರದಂತೆ ರತ್ನಗಳನ್ನು ಖಚಿತಪಡಿಸಿ ಉಂಗುರ ತಯಾರಿಸಬೇಕು.)

**ಶ್ಲೋಕ ||** ಮಾಣಿಕ್ಯಂ ಕರಣೇರ್ಮಧ್ಯೆ ಪ್ರಾಚ್ಯಾ ವಜ್ರಂ ಭೃಗೋರ್ವಿದೋಃ ।
ಆಗ್ನೇಯಾಂ ಮೌಕ್ತಿಕಂಯಾಮ್ಯೇ ಪ್ರವಾಳ ಮಂಗಳಸ್ಯಚ ॥
ಗೋಮೇಧಂ ರಾಕ್ಷಸೋರಾಹೋಃ ಪಶ್ಚಿಮಂ ನೀಲಕಂಶನೇ ।
ವಾಯವ್ಯಾಂ ವೈಢೂರ್ಯಕಂ ಕೇತೋ ರುದೀಚ್ಯಾಂ ಪುಷ್ಪಕಂ ಗುರೋಃ॥
ಗಾರುತ್ಮಕಂ ತದೈಶಾನ್ಯಂ ಸೋಮಪುತ್ರಸ್ಯ ತುಷ್ಟಯೇ ।
ಮುದ್ರಿಕಾಂಚನ ರೈರ್ಧಾರ್ಯಂ ಗ್ರಹಾಣಾಂ ಪ್ರಿತಯೇಸದು ॥
ಪಾಲನಾರ್ಗುರುವರ್ಯಾಣಾಂ ದೇವಬ್ರಾಹ್ಮಣ ವಂದನಾತ್ ।
ವೇಲಾದಿ ಶ್ರವಣಾ ದ್ವಾಪಿ ಸಾಧೂನಾಮಪಿ ಭಾಷಣಾತ್ ॥
ಮನಶುದ್ಧ್ಯರ್ಜಪಾದ್ದಾನಾದ್ಧೋ ಮಾದದ್ವರ ದಶ್ಯನಾತ್ ।
ನೋಕುರ್ವಂತಿ ಗ್ರಹಾಃ ಪೀಡಾಂ ದುಷ್ಟ ಸ್ಥಾನಸ್ಥಿತಾ ಅಪಿ ॥

**ಅರ್ಥ :** ಸೂರ್ಯನ ಪ್ರೀತ್ಯರ್ಥವಾಗಿ ಮಧ್ಯಭಾಗದಲ್ಲಿ ಕೆಂಪು ಮಣಿಯನ್ನು (ಮಾಣಿಕ್ಯವನ್ನು), ಚಂದ್ರನ ಪ್ರೀತ್ಯರ್ಥಕ್ಕಾಗಿ ಆಗ್ನೇಯ ದಿಕ್ಕಿನಲ್ಲಿ ಮುತ್ತನ್ನು, ಅಂಗಾರಕನ ಪ್ರೀತ್ಯರ್ಥಕ್ಕಾಗಿ ದಕ್ಷಿಣ ದಿಕ್ಕಿನಲ್ಲಿ ಹವಳವನ್ನು, ಬುಧನ ಪ್ರೀತ್ಯರ್ಥಕ್ಕಾಗಿ ಈಶಾನ್ಯ ದಿಕ್ಕಿನಲ್ಲಿ ಗರುಡ ಪಚ್ಚೆಯನ್ನು, ಗುರುವಿನ ಪ್ರೀತ್ಯರ್ಥಕ್ಕಾಗಿ ಉತ್ತರ ದಿಕ್ಕಿನಲ್ಲಿ ಪುಷ್ಪರಾಗವನ್ನು, ಶುಕ್ರನ ಪ್ರೀತ್ಯರ್ಥಕ್ಕಾಗಿ ಪೂರ್ವ ದಿಕ್ಕಿನಲ್ಲಿ ವಜ್ರವನ್ನು, ಶನಿಯ ಪ್ರೀತ್ಯರ್ಥಕ್ಕಾಗಿ ಪಶ್ಚಿಮ ದಿಕ್ಕಿನಲ್ಲಿ ನೀಲಮಣಿಯನ್ನು, ರಾಹುವಿನ ಪ್ರೀತ್ಯರ್ಥಕ್ಕಾಗಿ ನೈರುತ್ಯ ದಿಕ್ಕಿನಲ್ಲಿ ಗೋಮೇಧಿಕವನ್ನು ಮತ್ತು ಕೇತುವಿನ ಪ್ರೀತ್ಯರ್ಥಕ್ಕಾಗಿ ವಾಯುವ್ಯ ದಿಕ್ಕಿನಲ್ಲಿ ವೈಢೂರ್ಯವನ್ನು – ಈ ಪ್ರಕಾರವಾಗಿ ನವರತ್ನಖಚಿತವಾದ ಅಂಗುಳ್ಯಾಭರಣ ಎಂದರೆ ಬೆರಳಿಗೆ ಉಂಗುರ ಮಾಡಿಸಿ

ಧರಿಸುವುದರಿಂದ ನವಗ್ರಹಗಳು ದುಷ್ಟ ಸ್ಥಾನಗಳಲ್ಲಿರುವಾಗ ಉಂಟುಮಾಡತಕ್ಕ ದುಷ್ಪರಿಣಾಮಗಳು ನಿವಾರಣೆಯಾಗುತ್ತವೆ. ಹಿರಿಯರನ್ನು – ಗುರುಗಳನ್ನು ಪೂಜಿಸುವುದರಿಂದಲೂ, ದೇವ – ಬ್ರಾಹ್ಮಣರಿಗೆ ನಮಸ್ಕರಿಸುವುದರಿಂದಲೂ, ವೇದಾಧ್ಯಯನ ಮಾಡುವುದರಿಂದಲೂ, ಸಾಧು – ಸಂತರೊಂದಿಗೆ ಆಧ್ಯಾತ್ಮಿಕ ವಿಷಯವಾಗಿ ಸಂಭಾಷಿಸುವುದರಿಂದಲೂ, ಜಪ – ತಪ – ಮಂತ್ರೋಚ್ಚಾರಣೆ ಮಾಡುವುದರಿಂದಲೂ, ದಾನ, ಹೋಮ, ಯಜ್ಞಾದಿಗಳನ್ನು ಆಚರಿಸುವುದರಿಂದಲೂ ನವಗ್ರಹ ಪೀಡಾ ದೋಷ ಪರಿಹಾರವಾಗಿ ಶಾಂತಿ ಸೌಖ್ಯಗಳು ಲಭಿಸುತ್ತವೆ.

## ಸರ್ವಮಂಗಳಕರ ರತ್ನಗಳು – 17

### (ಲಕ್ಷ್ಮೀನಿವಾಸ ರತ್ನಗಳಲ್ಲಿ)

ದಾರಿದ್ರ್ಯತೆಯನ್ನು ಹೋಗಲಾಡಿಸಿಕೊಳ್ಳಲು ಮಹಾಲಕ್ಷ್ಮಿಯ ಆರಾಧನೆ. ಅಷ್ಟೈಶ್ವರ್ಯಕ್ಕೆ ಕಾರಣಳು ಮಹಾಲಕ್ಷ್ಮಿ. ಯಾರು ಅಸತ್ಯವಂತರೋ, ಯಾವ ಸ್ತ್ರೀಯರಲ್ಲಿ ಪಾತಿವ್ರತ್ಯವಿಲ್ಲವೋ, ಯಾವ ಸ್ಥಳದಲ್ಲಿ ಪರಕೆಗಳನ್ನಿಡುವರೋ, ಎಲ್ಲಿ ಮಂಗಸದಳಡಿಯೋ, ಯಾರು ಅತಿಯಾಗಿ ನಿದ್ರಿಸುವರೋ, ಎಲ್ಲಿ ದೀಪದ ನೆರಳಿರುವುದೋ, ಎಲ್ಲಿ ದುರಾಚಾರಗಳಿರುವುದೋ, ಎಲ್ಲಿ ಘಾಟುಹೊಗೆ ಹಾಕಿರುವುದೋ – ಈ ಎಂಟು ಸ್ಥಳಗಳಲ್ಲಿ ಅಲಕ್ಷ್ಮೀ ವಾಸಮಾಡುತ್ತಾಳೆ. ಅಂದರೆ ದಾರಿದ್ರ್ಯವುಂಟಾಗುವುದು, ನಿರ್ಗತಿಗೆ ಕಾರಣವಾಗುವುದು.

ಹಾಗಿದ್ದಲ್ಲಿ ಈ ಲಕ್ಷ್ಮೀನಿವಾಸ ಯಾರ ಗೃಹದಲ್ಲಿ ? ಯಾವ ರೀತಿಯ ವ್ಯಕ್ತಿಗಳಲ್ಲಿ ? ಯಾವ ಯಾವ ಸ್ಥಳಗಳಲ್ಲಿ ?

ಒಂದು ಧಾರ್ಮಿಕ ಗ್ರಂಥದ ಪ್ರಕಾರ ಲಕ್ಷ್ಮೀನಿವಾಸ ಸ್ಥಾನ 16 ಸ್ಥಳಗಳಲ್ಲಿ ಎಂದು ಹೇಳಲಾಗಿದೆ.

1) ಸತ್ಯವಂತರಲ್ಲಿ
2) ಸುಲಕ್ಷಣವಾದ ಗೃಹದಲ್ಲಿ
3) ರಾಜರಲ್ಲಿ
4) ವೀರರಲ್ಲಿ
5) ಜಯದ ಧ್ವಜದಲ್ಲಿ
6) ಆನೆ, ಕುದುರೆಗಳಲ್ಲಿ
7) ಗೋವುಗಳಲ್ಲಿ
8) ಛತ್ರ ಚಾಮರಗಳಲ್ಲಿ
9) ತಾವರೆ ಹೂಗಳಲ್ಲಿ
10) ಬೆಳೆಯುಳ್ಳ ಭೂಮಿಯಲ್ಲಿ
11) ಹೂವಿನ ತೋಟಗಳಲ್ಲಿ
12) ಸ್ವಯಂವರಗಳಲ್ಲಿ
13) ದೀಪಗಳಲ್ಲಿ (ದೀಪದ ಕಂಬಗಳಲ್ಲಿ)
14) ಕನ್ನಡಿಗಳಲ್ಲಿ
15) ಮಂಗಳ ದ್ರವ್ಯಗಳಲ್ಲಿ (ಅರಿಶಿನ, ಕುಂಕುಮ, ಹೂವು ಇತ್ಯಾದಿಗಳಲ್ಲಿ)
16) ರತ್ನಗಳಲ್ಲಿ

ಈ ಮೇಲಿನ ವಿವರಣೆಯಿಂದ "ರತ್ನಗಳಲ್ಲೂ" ಐಶ್ವರ್ಯವುಂಟುಮಾಡುವ ಮಹಾಲಕ್ಷ್ಮಿ ವಾಸಿಸುವಳೆಂದು ಅರ್ಥವಾಗುವುದು. ಆದ್ದರಿಂದಲೇ ಇರಬೇಕು ಇದನ್ನು ಧರಿಸಿ ಲಕ್ಷ್ಮೀಪುತ್ರರಾಗುವರೆಂಬ ನಂಬಿಕೆ ಅನಾದಿ ಕಾಲದಿಂದ ಇಂದಿಗೂ ಅನೂಚಾನವಾಗಿ ನಡೆದುಬಂದಿದೆ. ರತ್ನ ಸಂಗ್ರಹಿಸಿದ್ದಲ್ಲಿಯೂ ಲಕ್ಷ್ಮಿಯು ವಾಸಮಾಡುವಳೆಂಬ ನಂಬಿಕೆಗೆ ಸಮರ್ಥನೆ ನೀಡಿದಂತಾಯ್ತು.

**ವಾಗ್ಭಟಾಚಾರ್ಯನ ಮಹಾವಾಕ್ಯ**

**ಶ್ಲೋಕ ||** ಧಾರಯೇತ್ ಸತತಂ ರತ್ನಸಿದ್ಧ ಮಂತ್ರಮಹೌಷಧೀ ||

**ಅರ್ಥ :** ಸದಾ ರತ್ನವನ್ನು, ಸಿದ್ಧಮಂತ್ರವನ್ನು ಮಹೌಷಧಿಯನ್ನು ಪಡೆದೇ ಇರಬೇಕೆಂಬುದು ಇದರ ಅರ್ಥ.

**ಕಲ್ಕತ್ತೆಯ ಖ್ಯಾತ ಜ್ಯೋತಿಷಿ ಶ್ರೀ ಸಾಧನ್‌ಬಾಯ್‌ರವರ ಸಲಹೆ**

ಶ್ರೀ ಸಾಧನಬಾಯ್‌ರವರ ಗ್ರಂಥ "ರತ್ನ ಸಮಾಧಾನ್" ಎಂಬುದರಲ್ಲಿ ಕೆಲವು ನಿರ್ದಿಷ್ಟ ಸಮಸ್ಯೆಗಳಿಗೆ ರತ್ನಗಳನ್ನು ಧರಿಸಿ ಹೇಗೆ ಪರಿಹರಿಸಿಕೊಳ್ಳಬೇಕೆಂದು ಸಲಹೆ ನೀಡಿರುವರು.

ಇಂದಿನ ಆಧುನಿಕ ಜೀವನದಲ್ಲಿ ಬಹಳ ಜನಕ್ಕೆ ಪ್ರಮುಖವಾದ ಸಮಸ್ಯೆಗಳೆಂದರೆ ವಿದ್ಯಾಭ್ಯಾಸ, ಉದ್ಯೋಗ, ವ್ಯಾಪಾರ, ವಿವಾಹ ಇತ್ಯಾದಿಗಳು. ಈ ಸಮಸ್ಯೆಗಳಿಗೆ ಶ್ರೀ ಸಾಧನಬಾಯ್‌ಸವರ ಸಲಹೆ ಏನೆಂದು ಇಲ್ಲಿ ತಿಳಿಯಿರಿ.

| | | |
|---|---|---|
| 1) ವಿವಾಹ ಬೇಗನೆ ನಡೆಯಲು | — | ಧರಿಸಬೇಕಾದ ರತ್ನ-ಹವಳ ಮತ್ತು ಚಂದ್ರಕಾಂತಮಣಿ. |
| 2) ವಿದ್ಯಾಭ್ಯಾಸದಲ್ಲಿ ಪ್ರಗತಿ ಪಡೆಯಲು | — | ಪಚ್ಚೆ, ಹವಳ ಮತ್ತು ಪುಷ್ಪರಾಗ ವನ್ನು ಧರಿಸಬೇಕು. |
| 3) ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಲು | — | ವೈಢೂರ್ಯ, ಪುಷ್ಪರಾಗ ಮತ್ತು ಪಚ್ಚೆಯನ್ನು ಧರಿಸಬೇಕು. |
| 4) ಉದ್ಯೋಗದಲ್ಲಿ ಬಡ್ತಿಗೆ | — | ನೀಲ, ವಜ್ರ, ಪುಷ್ಪರಾಗ ಮತ್ತು ಪಚ್ಚೆಯನ್ನು ಧರಿಸಬೇಕು. |

**ಮಾಂಗಲ್ಯದಲ್ಲಿ ಮಂಗಳನ ರತ್ನ**

ಮಾಂಗಲ್ಯ ಭದ್ರತೆ - ಪ್ರತಿಯೋರ್ವ ಭಾರತದ ನಾರಿಯ ಆಕಾಂಕ್ಷೆ. ಭೂತ, ಪ್ರೇತಾದಿಗಳಿಂದ ದೂರವಿರಬೇಕು. ತನ್ನ ಜಾತಕದಲ್ಲಿರುವ ಮಂಗಳನ ದೋಷದಿಂದ

ವಿಮುಕ್ತರಾಗಿ ಮುತ್ತೈದೆಯಾಗಿ, ಸುಮಂಗಲೆಯಾಗಿ ಬಾಳಬೇಕು – ಇದಕ್ಕೆ ಅವಶ್ಯಕ ವಾಗಿ ಮಾಂಗಲ್ಯಧಾರಣೆ. ಈ ಮಾಂಗಲ್ಯದಲ್ಲಿ ಮಂಗಳನ ರತ್ನವಾದ ಹವಳವನ್ನು ಸೇರಿಸಿರುವರು–ಹಾಗಿಲ್ಲ ಮಂಗಳನ ದೋಷ ತಪ್ಪದು ಎಂಬ ನಂಬಿಗೆ.

ಮಂಗಳನ ಗ್ರಹ ಅಂದರೆ ಕುಜನು. ಈ ಗ್ರಹವು ಯಾರದೆ ಜಾತಕದಲ್ಲಿ ಲಗ್ನ ದಿಂದಾಗಲಿ, ಚಂದ್ರನಿಂದಾಗಲಿ, ಶುಕ್ರನಿಂದಾಗಲಿ 1, 2, 4, 5, 7, 8, 12 ಈ ಸ್ಥಾನಗಳಲ್ಲಿ ಇದ್ದಲ್ಲಿ ಮಂಗಳದೋಷ ಉಂಟಾಗುವುದು. ಇದು ವಧು - ವರ, ಸತಿ-ಪತಿಯರ ಜಾತಕಗಳಲ್ಲಿ ಸಮವಿರಬೇಕು. ಪತಿಗಿಂತಲೂ ಸತಿಗೆ ಕಡಿಮೆಯೂ ಇರಬಹುದು. ಪತಿಗೆ ಸ್ವಲ್ಪ ಹೆಚ್ಚಾಗಿರಬಹುದು. ಈ ರೀತಿ ನಾನಾ ಹೇಳಿಕೆಗಳನ್ನು ವಧು-ವರರ ಜಾತಕ ಪರಿಶೀಲಿಸುವಾಗ ಜ್ಯೋತಿಷಿಗಳು ಹೇಳುವರು. ಹೆಚ್ಚಿನ ವಿವರಣೆಗಾಗಿ ನಮ್ಮಲ್ಲಿ ದೊರೆಯುವ "ಮಂಗಳನ ದೋಷ" ಎಂಬ ಪುಸ್ತಕದಲ್ಲಿ ಕಾಣಬಹುದು. ಈ ಮಂಗಳದೋಷವಿದ್ದರೆ ಮಾಂಗಲ್ಯದ ಭದ್ರತೆ ಇರದು. ಅದಕ್ಕಾಗಿ ಆ ಗ್ರಹದ ರತ್ನ–ಹವಳವನ್ನು ಅದರಲ್ಲಿ ಸೇರಿಸಿ ಧರಿಸುವರು.

**ಹಿಂದೂ ಧರ್ಮಶಾಸ್ತ್ರಕ್ಕೆ ಬುನಾದಿಯಾದ "ಮನಸ್ಮೃತಿ"ಯಲ್ಲಿ ರತ್ನಗಳ ವಿಚಾರ**

**ಶ್ಲೋಕ** ॥ ಮಣಿಮುಕ್ತ ಪ್ರವಾಲಾನಿ ಹೃತ್ವಾಲೋಭೇನ ಮಾನವಃ ।
ವಿವಿಧಾನಿಚರತ್ನಾನಿ ಜಾಯತೇ ಹೇಮಕರ್ತೃಷಃ ॥

**ಅರ್ಥ :** ಮುತ್ತು, ಹವಳ, ಮಣಿಗಳನ್ನು ಕದಿಯುವವನು ಮುಂದಿನ ಜನ್ಮದಲ್ಲಿ ಸೋನಗಾರ ಜನ್ಮವುಂಟಾಗುತ್ತದೆ.

**ಋಗ್ವೇದದಲ್ಲಿ ರತ್ನಗಳ ಪ್ರಸ್ತಾಪ**

ವಿಶ್ವದ ಪ್ರಪ್ರಥಮ ಆಧ್ಯಾತ್ಮ ಗ್ರಂಥ - ಋಗ್ವೇದ. ಋಗ್ವೇದದ ಅನೇಕ ಮಂತ್ರಗಳಲ್ಲಿ ರತ್ನದ ಶಬ್ದವನ್ನು ಬಳಸಲಾಗಿದೆ. ಈ ಮಹಾನ್ ಗ್ರಂಥದ ಒಂದು ಮಂತ್ರ ಹೀಗಿದೆ—

ಅಗ್ನಿಮೀಳೆ ಪುರೋಹಿತಮ್ ಯಜ್ಞಸ್ಯದೇವಮೃತ್ವಿಜಮ್ ।
ಹೊತಾದಂ ರತ್ನಧಾತತಮ್ ॥

"ಅಗ್ನಿದೇವನಿಗೆ ರತ್ನಧಾತಕಮ್" ಎಂದಿರುವರು.

**ಶ್ಲೋಕ ||** ಪೂರ್ವ ಮಾಯುಃ ಪರಿಕ್ಷ್ಯೇವ ಪಶ್ಚಾಲ್ಲಕ್ಷಣಮುಚ್ಯತೆ ।
ಆಯುರ್ವಿನಾ ನರಾಣಾಂತು ಲಕ್ಷಣ್ಯೈಃ ಕಿಂ ಪ್ರಯೋಜನಮ್ ॥

**ಅರ್ಥ :** ಭವಿಷ್ಯತ್ ಪುರಾಣದ ಈ ಶ್ಲೋಕದಲ್ಲಿ ಅಡಗಿರುವ ಅರ್ಥ ಎಂತಹ ಮಹತ್ವದ್ದು. ಸಕಲ ರಾಜಯೋಗ ಲಕ್ಷಣಗಳಿದ್ದರೂ, ಆಯುಷ್ಯವಿಲ್ಲದ ವ್ಯಕ್ತಿಗೆ ಯಾವ ಶುಭ ಯೋಗವೂ ಪ್ರಯೋಜನವಾಗಲಾರದು.

**ಶ್ಲೋಕ ||** ಜೀವೇದ್ವರ್ಷಶತಂ ಸಾಗ್ರಮಗಮೃತ್ಯು ವಿವರ್ಜಿತಃ ।
ನಶ್ಯಂತಿ ವ್ಯಾಧಯಸ್ಸರ್ವೇ ಲುತಾವಿ ಸ್ಫೋಟ ಕಾದಯಃ ॥

**ಅರ್ಥ :** ಇದು ವರಾಹಪುರಾಣದಲ್ಲಿ ಕಂಡುಬರುವ ಶ್ಲೋಕ. ಅಪಮೃತ್ಯುಗೆ ಈಡಾಗದೆ, ವ್ಯಾಧಿಗಳೆಲ್ಲ ನಾಶವಾಗಿ ಸಂಪೂರ್ಣ ನೂರು ವರ್ಷಗಳ ಕಾಲ ಬದುಕ ಬೇಕೆಂದು ದೇವಿವಚನ ಈ ಶ್ಲೋಕದ ಅರ್ಥ.

ನೂರು ವರ್ಷ ಕಾಲ ಆರೋಗ್ಯದಿಂದ ಬಾಳಬೇಕೆಂದು ಎಲ್ಲರ ಇಚ್ಛೆ. ಇದು ಸಾಧ್ಯವೇ ಎಂಬುದಕ್ಕೆ ಜ್ಯೋತಿಶ್ಶಾಸ್ತ್ರದ ಉತ್ತರಕ್ಕೆ ಇಲ್ಲಿ ನೋಡಿ.

### ಜನ್ಮಾಂತರ ಕರ್ಮ ರೋಗೋತ್ಪತ್ತಿಗೆ ಕಾರಣ – ಜ್ಯೋತಿಶ್ಶಾಸ್ತ್ರ

**1. ಪಾಪಕರ್ಮಗಳಿಂದ ರೋಗೋತ್ಪತ್ತಿ :** ರೋಗಮುಕ್ತ ಜೀವನ ಸಾಮಾನ್ಯನಿಗೆ ಎಟುಕದ ಕನಸು. ಭೌತಿಕ ಜೀವನ ನಡೆಸುವ ಮಾನವ ಒಂದಲ್ಲೊಂದು ಕಾರಣದಿಂದ ಯಾವುದೇ ಒಂದು ಕಾಲದಲ್ಲಿ ರೋಗಕ್ಕೆ ತುತ್ತಾಗದೆ ಇರಲಾರ. ಸಂಚಿತ ಕರ್ಮ ಅಂದರೆ ಜನ್ಮ ಜನ್ಮಾಂತರದಿಂದ ಉಂಟಾದ ಕರ್ಮ. ಪ್ರಸ್ತುತ ಕರ್ಮಗಳ ಸಂಯೋಜಿತ ಫಲಗಳನ್ನು ಅನುಭವಿಸಿಯೇ ತೀರಬೇಕು. ಶುಭ ಕರ್ಮದಿಂದ ಶುಭ ಫಲಗಳನ್ನೂ, ಅಕರ್ಮಗಳಿಂದ ಅಶುಭ ಫಲಗಳನ್ನು ಪಡೆಯಲೇಬೇಕು.

ರೋಗ, ವ್ರಣ, ರುಜಿನಗಳು ಜನ್ಮಜನ್ಮಾಂತರದಿಂದ ನಾವು ಎಸಗಿದ ಅಕರ್ಮ ಗಳಿಂದ ರೂಪುಗೊಳ್ಳುವುದು. ಈ ರೀತಿ ತಿಳಿಸುವುದು ವೇದಾಂಗ ಜ್ಯೋತಿಷ.

ರೋಗಗಳಲ್ಲಿ ಮೂರು ಬಗೆ (ಅ) ಶಾರೀರಕ ರೋಗಗಳು, (ಆ) ಮಾನಸಿಕ ರೋಗಗಳು, (ಇ) ಅಲೌಕಿಕ [ಭೌಧಿಕ] ರೋಗಗಳು. ಈ ರೋಗಗಳುಂಟಾಗಲು ಯಾವ ಗ್ರಹ ಮತ್ತು ಜಾತಕದಲ್ಲಿ, ಯಾವ ಭಾವವು ಹೇಗೆ ಸೂಚಿಸುವುದೆಂದು ತಿಳಿಸಲು ಜ್ಯೋತಿಶ್ಶಾಸ್ತ್ರ ಅಧ್ಯಯನ ಅವಶ್ಯಕ.

**2. ಮಾತಾಪಿತೃ, ಗುರುಹಿರಿಯರ ಶಾಪದಿಂದಲೂ ರೋಗ :** ಕೇವಲ ಪೂರ್ವಾಜಿತ ಪಾಪಕರ್ಮದಿಂದಲೇ ರೋಗವುಂಟಾಗಬೇಕೆಂದಿಲ್ಲ, ಹೆತ್ತ ತಾಯಿಗೆ ದುಃಖವುಂಟುಮಾಡಿದರೆ, ಅವಳನ್ನು ನಾನಾ ಕಷ್ಟಗಳಿಂದ ನರಳಿಸಿದರೆ, ಅವಳಿಗೆ

ವಿರೋಧವಾಗಿ ನಡೆದುಕೊಂಡರೆ, ಅವಳನ್ನು ವಿನಾಕಾರಣ ತ್ಯಜಿಸಿದರೆ ಈ ದುಃಖಾತೀತ ಸ್ಥಿತಿಯಿಂದ ತಾಯಿಯು ಶಾಪ ಕೊಡಬಹುದು. ತಾಯಿಗಿಂತ ದೇವರಿಲ್ಲ. ತಾಯಿ ಸೇವೆ ಮಾಡದೆ ದೇವರಲ್ಲಿ ಮೊರೆ ಹೊಕ್ಕರೂ ಪ್ರಯೋಜನವಾಗದು. ತಾಯಿಯ ಶಾಪದಿಂದ ರೋಗಗಳುಂಟಾಗುತ್ತವೆ ಎಂದು ತಿಳಿಸುವುದು ಜ್ಯೋತಿಶ್ಶಾಸ್ತ್ರ. ಈ ರೀತಿಯಲ್ಲೇ ಪಿತೃಶಾಪ, ಗುರುಶಾಪ, ಹಿರಿಯರ ಶಾಪಕ್ಕೆ ಈಡಾಗುವ ಕಾರಣಗಳನ್ನು ಜಾತಕದಲ್ಲಿ ಕಂಡುಹಿಡಿಯಬಹುದೆಂದು ಜ್ಯೋತಿಶ್ಶಾಸ್ತ್ರ ತಿಳಿಸುವುದು. ಇಷ್ಟೇ ಅಲ್ಲ ! ದೇವ, ದಾನವ, ಯಕ್ಷ, ಗಂಧರ್ವರ ಉಗ್ರತೆಯಿಂದಲೂ, ಭೂತ-ಪ್ರೇತ, ಪಿಶಾಚಾದಿಗಳ ಬಾಧೆಯಿಂದಲೂ ರೋಗಗಳುಂಟಾಗಲು ಸಾಧ್ಯವಿದೆ. ಇದನ್ನು ಜಾತಕವೆಂಬ ಕನ್ನಡಿಯಲ್ಲಿ ಜ್ಯೋತಿಷಿಗೆ ನಿರ್ಧರಿಸಲು ಸಾಧ್ಯವಿದೆ. ಕೇವಲ ರೋಗಕ್ಕೆ ಕಾರಣ, ರೋಗ ವಿವರಣೆಯನ್ನು ಕೊಡುವುದರಲ್ಲಿ ಕೊನೆಗೊಳ್ಳದೆ ಸೂಕ್ತ ಶಾಂತಿ, ದಾನ, ಜಪಮಣಿ, ಮಂತ್ರ ಯಂತ್ರಗಳ ಬಳಕೆಯಿಂದ ರೋಗಮುಕ್ತರಾಗಲು ಸಾಧ್ಯವೆಂದು ಜ್ಯೋತಿಷ ಗ್ರಂಥಗಳಲ್ಲಿ ತಿಳಿಸಲಾಗಿದೆ. (ಓದುಗರು ವಿಶೇಷ ಅಧ್ಯಯನ ಮಾಡುವ ಆಸಕ್ತಿ ಇದ್ದಲ್ಲಿ – ಪ್ರಶ್ನಮಾರ್ಗ ಜಾತಕ ಪಾರಿಜಾತ, ಫಲದೀಪಿಕ, ಕರ್ಮವಿಪಾಕ ಗ್ರಂಥಗಳನ್ನು ಪರಿಶೀಲಿಸಬಹುದು.) ಇಲ್ಲಿ ಜ್ಯೋತಿಶ್ಶಾಸ್ತ್ರದಲ್ಲಿ ರೋಗಕ್ಕೆ ಕಾರಣವಾಗುವ ಗ್ರಹ, ಭಾವಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಕೊಟ್ಟಿದ್ದೇವೆ.

**ರೋಗನಿರ್ಣಯ ಜ್ಯೋತಿಶ್ಶಾಸ್ತ್ರದಲ್ಲಿ ಹೇಗೆ ?**

ಪ್ರತಿಯೊಬ್ಬ ವ್ಯಕ್ತಿಯ ಜಾತಕದಲ್ಲಿ ಲಗ್ನವು ಶಾರೀರಕ ದಾರ್ಢ್ಯತೆ, ಆರೋಗ್ಯ ಸ್ಥಿತಿಯನ್ನು, ರೋಗ ನಿರೋಧಕ ಶಕ್ತಿಯನ್ನು ಸೂಚಿಸುವುದು. ಲಗ್ನ ಮತ್ತು ಲಗ್ನಾಧಿಪತಿ ಬಲಯುತವಾಗಿದ್ದರೆ ರೋಗ ಭಯವಿಲ್ಲ. ಲಗ್ನದಿಂದ 6ನೇ ಮನೆ (ಭಾವ) ರೋಗಸ್ಥಾನ. ಲಗ್ನ ಮತ್ತು ಲಗ್ನಾಧಿಪತಿಗಿಂತಲೂ 6ನೇ ಭಾವ ಮತ್ತು ಆ ಭಾವಾಧಿಪತಿ ಪ್ರಾಬಲ್ಯ ಪಡೆದಿದ್ದರೆ ರೋಗದಿಂದ ನರಳುವ ಸಾಧ್ಯತೆ ಹೆಚ್ಚು.

**ರೋಗ ಸಂಭವಿಸಲು—**

1. 6ನೇ ಭಾವಾಧಿಪತಿ
2. 6ನೇ ಭಾವದಲ್ಲಿರುವ ಗ್ರಹಗಳು
3. 8 ಮತ್ತು 12ನೇ ಭಾವಸ್ಥಿತರಾದ ಗ್ರಹಗಳು
4. 6ನೇ ಭಾವಾಧಿಪತಿಯೊಂದಿಗೆ ಕೂಡಿಕೊಂಡಿರುವ ಗ್ರಹಗಳು ಕಾರಣವಾಗಬಹುದು.

**ಯಾವ ಗ್ರಹದಿಂದ ಯಾವ ರೀತಿಯ ರೋಗ ?**

1. ರವಿ : ಪಿತ್ತ ವಿಕಾರದಿಂದ ಬರುವ ಜ್ವರಗಳು, ನೇತ್ರ ರೋಗಗಳು, ಹೃದಯ ರೋಗಗಳು, ರಕ್ತವತ್ತಡ, ರಕ್ತ ಸಂಚಾರದಲ್ಲಿ ಏರುಪೇರಾಗುವಿಕೆ,

ಮೂರ್ಛೆ, ಶಿರೋವೇದನೆ, ಬೊಕ್ಕತಲೆ, ಕೂದಲು ಬೆಳೆಯಲು ಅಡ್ಡಿ, ಶರೀರಾದ್ಯಂತ ಉರಿ ಇತ್ಯಾದಿ.

**2. ಚಂದ್ರ :** ಅತಿ ನಿದ್ರೆ, ಶ್ವಾಸ ರೋಗಗಳು, ಕ್ಷಯ, ಮಾನಸಿಕ ಉದ್ವೇಗ, ಅರ್ಜೀನವ್ಯಾಧಿ-ಕಾಮಾಲೆ, ಶೀತಜ್ವರ, ನಿಶ್ಶಕ್ತಿ, ಕೆಲವು ರೀತಿಯ ಚರ್ಮ ರೋಗಗಳು, ಗೂರಲು, ರಕ್ತಹೀನತೆ, ಶ್ವೇತಪ್ರದರ, ಬಾವು, ಮೂತ್ರ ವಿಕಾರ, ಅತಿಸಾರ, ಆಹಾರದಲ್ಲಿ ಅರುಚಿ, ನಪುಂಸಕತ್ವ, ಶೀತವ್ಯಾಧಿಗಳು ಇತ್ಯಾದಿ.

**3. ಕುಜ ;** ಬಾಯಾರಿಕೆ, ಕುಷ್ಠರೋಗ, ಮಾಂಸಖಂಡಗಳಲ್ಲಿ ಬಾಧೆ, ಉಗ್ರ ಭಾವನೆಗಳು, ನೇತ್ರರೋಗ, ಮೂರ್ಛೆ, ಅಂಗಹೀನತೆ, ಶರೀರದ ಮೇಲ್ಭಾಗ ಗಳಲ್ಲಿ ರೋಗಗಳು, ಮಾನಸಿಕ ವೈಪರೀತ್ಯ, ಗಾಯಗಳು, ಗ್ರಂಥಿಗಳು, ಜಠರಬಾಧೆ ಇತ್ಯಾದಿ.

**4. ಬುಧ :** ನರಗಳ ನಿಶ್ಶಕ್ತಿ, ತೊನ್ನು, ಬೆವರು, ನಪುಂಸಕತ್ವ, ಸ್ಪರ್ಶಜ್ಞಾನವಿಲ್ಲದ್ದು, ಕಿವುಡು, ಕಜ್ಜಿ, ತುರಿ, ತೊದಲು ಮಾತು, ಮೂಗಿನಲ್ಲಿ ಗಂಟಲಲ್ಲಿ ತೊಂದರೆ, ವಾತ, ಪಿತ್ತ, ಕಫಾದಿ ದೋಷಗಳಿಂದ ಉಂಟಾಗಬಹುದಾದ ಖಾಯಿಲೆಗಳು ಇತ್ಯಾದಿ.

**5. ಗುರು :** ಬಹುಮೂತ್ರ, ವಾತಪ್ರಕೋಪ, ಪ್ರಜ್ಞಾಹೀನ ಸ್ಥಿತಿ, ಕಫ ಸಂಬಂಧ ರೋಗ, ಸ್ಥೂಲತ್ವ, ತಲೆ ತಿರುಗುವಿಕೆ, ಕಾಮಾಲೆ, ಕರುಳಿನ ಬೇನೆ, ಮೂತ್ರಕೋಶದಲ್ಲಿ ತೊಂದರೆ, ಅತೀವ ಕ್ಲೇಶದಿಂದಾಗುವ ರೋಗಗಳು.

**6. ಶುಕ್ರ :** ರಕ್ತಹೀನತೆ, ವಾತ ಮತ್ತು ಕಫ ಸಂಬಂಧಿತ ರೋಗ, ದೃಷ್ಟಿದೋಷ, ಮೂತ್ರಜನಕಾಂಗದ ದೋಷಗಳು, ಗುಪ್ತವ್ಯಾಧಿಗಳು, ಅನಾರ್ಥವ ಉಪದಂಶ ಕಾಮಾತಿರೇಕದಿಂದ ನಿಸ್ತೇಜ ಶರೀರ, ಭಯ, ಶ್ವೇತಪ್ರದರ, ಪರವಮಾ ವ್ರಣ, ಜನನಾಂಗ ವ್ಯಾಧಿಗಳು, ಅಂತ್ರವೃದ್ಧಿ, ಗರ್ಭಾಶಯ ದೋಷಗಳು ಇತ್ಯಾದಿ.

**7. ಶನಿ :** ವಾಯು ಮತ್ತು ಕಫ ಸಂಬಂಧವಾದ ರೋಗಗಳು, ಪಾರ್ಶ್ವ ವಾಯು, ವಾತರೋಗ, ಕೀಲುವಾಯು, ಕಾಲು - ಪಾದಗಳಿಗೆ ಸಂಬಂಧಿಸಿದ ರೋಗಗಳು, ಮೂಳೆ ಮುರಿತ, ಹೊಟ್ಟೆನೋವು, ಮನೋವ್ಯಾಕುಲ, ದುರಾದೃಷ್ಟ ಸ್ಥಿತಿಯಿಂದ ಉಂಟಾಗುವ ರೋಗ, ಗೂರಲು, ದಮ್ಮು, ಅರ್ಬುದರೋಗ, ಆನೆಪಾದ, ಹುಚ್ಚು, ಗ್ರಂಥಿರೋಗಗಳು ಇತ್ಯಾದಿ.

**8. ರಾಹು :** ಹೃದಯ ಬಡಿತ ವೇಗದಲ್ಲಿ ವೈಪರೀತ್ಯ, ಕುಷ್ಠ, ಮಾನಸಿಕ

ದುಗುಡತೆ, ಆಹಾರದಲ್ಲಿ ವಿಷಮಿಶ್ರಣ, ಕೆಮ್ಮು, ಕರುಳಿನಲ್ಲಿ ಹುಣ್ಣು, ಗ್ರಂಥಿ ಜಠರಗಳ ರೋಗ, ಬೆರಕೆ ಆಹಾರ ಸೇವನೆಯಿಂದಾಗುವ ರೋಗಗಳು ಇತ್ಯಾದಿ.

**9. ಕೇತು :** ಕರುಳಿನಲ್ಲಿ ಜಂತುಗಳು, ಅಂಟು ಜಾಡ್ಯಗಳು, ರಕ್ತಒತ್ತಡ ಕಡಿಮೆ ಇರುವುದು, ಕಿವುಡು, ಮೂರ್ಛೆ, ಮಾತನಾಡಲು ತೋದರೆ (ತೊದಲುವಿಕೆ) ಸ್ಫೋಟಕ ಜ್ವರ ಇತ್ಯಾದಿ.

**10. ಗುಳಿಕ :** ವಿಚಿತ್ರವಾದ ಭಯಗಳಿಂದುಂಟಾಗುವ ರೋಗಗಳು, ವಿಷಸೇವನೆ, ಶರೀರಾದ್ಯಂತ ನೋವು, ಮಲಿನತೆಯಿಂದ ಬರುವ ರೋಗಗಳು ಇತ್ಯಾದಿ.

**ಜ್ಯೋತಿಷ ಪಂಡಿತ ಶ್ರೀ ಮಂತ್ರೇಶ್ವರ "ಫಲದೀಪಿಕ" ಗ್ರಂಥದಲ್ಲಿ**

6 ಅಥವಾ 8ನೇ ಭಾವದಲ್ಲಿ

| | | |
|---|---|---|
| ರವಿ ಸ್ಥಿತನಾಗಿದ್ದರೆ | — | ಜ್ವರ ಭಯ |
| ಚಂದ್ರ ಸ್ಥಿತನಾಗಿದ್ದರೆ | — | ರಾಜಯಕ್ಷ (ಕ್ಷಯ) |
| ಕುಜ ಅಥವಾ ಕೇತು ಇದ್ದರೆ | — | ಹೊಟ್ಟೆಯಲ್ಲಿ ವ್ರಣ |
| ಶುಕ್ರನು ಸ್ಥಿತನಾಗಿದ್ದರೆ | — | ಗುಪ್ತ ಅಂಗಗಳಲ್ಲಿ ವ್ಯಾಧಿ |
| ಶನಿಯು ಸ್ಥಿತನಾಗಿದ್ದರೆ | — | ನರಗಳ ರೋಗಗಳು |
| ರಾಹು ಸ್ಥಿತನಾಗಿದ್ದರೆ | — | ರಾಜಕುರು |
| ಶನಿ ಮತ್ತು ಚಂದ್ರರು ಕೂಡಿದ್ದರೆ | — | ಗುಲ್ಮರೋಗ |

**ಕೆಲವು ಗ್ರಹ ಸಂಯೋಗದಿಂದ ಉಂಟಾಗುವ ರೋಗಗಳು**

1) 2 ಮತ್ತು 12ನೇ ಭಾವಗಳನ್ನು ಸೂರ್ಯ ಮತ್ತು ಚಂದ್ರರು ದೃಷ್ಟಿಸಿದರೆ ಅಥವ ಆ ಭಾವಗಳಲ್ಲಿ ಸ್ಥಿತರಾಗಿದ್ದರೆ ನೇತ್ರ ರೋಗಗಳುಂಟಾಗುತ್ತೆ.

2) 3 ಮತ್ತು 11 ಹಾಗೂ ಗುರು-ಇವುಗಳನ್ನು ಶನಿ ಮತ್ತು ಕುಜರು ದೃಷ್ಟಿಸಿದರೆ ಕರ್ಣ ರೋಗಗಳುಂಟಾಗುತ್ತೆ.

3) ಕುಜನು 5ನೇ ಭಾವದಲ್ಲಿದ್ದರೆ ಹೊಟ್ಟೆಯ ವಿಕಾರಗಳು ಆಗುತ್ತೆ.

4) 8ನೇ ಭಾವಾಧಿಪತಿ 7ರಲ್ಲೂ, 6ನೇ ಭಾವಾಧಿಪತಿ 8ರಲ್ಲೂ ಸ್ಥಿತರಾಗಿದ್ದರೆ ಗುದದಲ್ಲಿ ರಕ್ತಸ್ರಾವವಾಗುತ್ತೆ.

5) ಶುಕ್ರನು 7 ಅಥವ 8ನೇ ಭಾವದಲ್ಲಿದ್ದರೆ ಗುಪ್ತರೋಗಗಳಿಂದ ನರಳುವರು.

**ಜ್ಯೋತಿಷದಲ್ಲಿರುವ ಕೆಲವು ಯೋಗಗಳು ಮತ್ತು ರೋಗಗಳು**

| | | | |
|---|---|---|---|
| 1. | ದುಷ್ಕೃತಿ ಯೋಗ | — | ಮಧುಮೇಹ, ಗುದದಲ್ಲಿ ನೋವು |
| 2. | ದರಿದ್ರ ಯೋಗ | — | ಕಿವಿಯ ರೋಗಗಳು |
| 3. | ಅವ ಯೋಗ | — | ಅಂಗಹೀನತ್ವ |
| 4. | ಸಿಸ್ರಾವ ಯೋಗ | — | ದಂತರೋಗ, ನೇತ್ರರೋಗ |
| 5. | ಮೃತಿ ಯೋಗ | — | ಆಯಾಸ, ಸುಸ್ತು |
| 6. | ಅಸ್ತ್ರ ಯೋಗ | — | ಕೈಕಾಲುಗಳ ವಿಕಾರ |
| 7. | ಶಕಟ ಯೋಗ | — | ಮನೋವ್ಯಾಕುಲ |
| 8. | ಅಶುಭೋಭಯಚಾರಿ ಯೋಗ | — | ಮಾನಸಿಕ ದುಗುಡತೆ |
| 9. | ಪಾಪಕರ್ತರಿ ಯೋಗ | — | ಅಂಗವಿಕಲತೆ |

**ವಿ. ಸೂ :** ಮೇಲಿನ ಯೋಗಫಲವು ಶುಭ ಯೋಗಗಳಿಂದ ನಿವಾರಣೆಯಾಗುವ ಸಾಧ್ಯತೆ ಇದೆ. ಜಾತಕದ ಪೂರ್ಣವಿಶ್ಲೇಷಣೆ ಮಾಡದೆ ಫಲನಿರ್ದೇಶನ ಮಾಡಬಾರದು.

**ಹಲವು ವಿಶಿಷ್ಟ ಗ್ರಹಸ್ಥಿತಿಗಳಿಂದ ಸಂಭವಿಸಬಹುದಾದ ರೋಗಗಳು**

1. ಸೂರ್ಯ ಮತ್ತು ಚಂದ್ರರಲ್ಲಿ ಒಬ್ಬನು ಲಗ್ನದಿಂದ 12ನೇ ಭಾವದಲ್ಲಿಯೂ ಮತ್ತೊಬ್ಬನು 6ನೇ ಭಾವದಲ್ಲಿಯೂ ಇದ್ದರೆ ಅಂಧತ್ವವು ಜಾತಕನಿಗೆ ಮತ್ತು ಜಾತಕನ ಪತ್ನಿಗೆ ಸಂಭವಿಸಬಹುದು.

2. ರವಿ ಮತ್ತು ಶುಕ್ರರಿಬ್ಬರೂ 5, 7 ಅಥವ 9ನೇ ಭಾವದಲ್ಲಿ ಕೂಡಿ ಕೊಂಡಿದ್ದರೆ ಜಾತಕನ ಪತ್ನಿಗೆ ಅಂಗವಿಕಲತೆಯುಂಟಾಗುವುದು.

3. ಲಗ್ನದಲ್ಲಿ ಶನಿ, 7ರಲ್ಲಿ ಶುಕ್ರರಿದ್ದು ಋಕ್ಷಸಂಧಿಯಾಗಿದ್ದು 5ನೇ ಭಾವವು ಶುಭ ಗ್ರಹಗಳಿಂದ ನೋಡಲ್ಪಡದಿದ್ದರೆ ಜಾತಕನ ಪತ್ನಿಗೆ ಸಂತಾನವಾಗುವುದಿಲ್ಲ.

4. ಶುಕ್ರ ಮತ್ತು ಕುಜರಿಬ್ಬರೂ 7ರಲ್ಲಿದ್ದು ಕ್ರೂರ ಗ್ರಹದೃಷ್ಟಿಗೆ ಒಳಗಾದರೆ ಉಪದಂಶಗರ್ಮಿ ಇತ್ಯಾದಿ ಗುಪ್ತ ವ್ಯಾಧಿಗಳಿಂದ ನರಳುವನು.

5. ಚಂದ್ರನು ಕಟಕ ಅಥವ ವೃಶ್ಚಿಕದಲ್ಲಿದ್ದು ಅಥವ ನವಾಂಶದಲ್ಲಿ ಈ ರಾಶಿಗಳಲ್ಲಿದ್ದು ಕ್ರೂರಗ್ರಹ ಸಂಬಂಧವುಳ್ಳವನಾದರೆ ಜಾತಕನಿಗೆ ಕರಳುಬೇನೆಗಳು ಉಂಟಾಗುತ್ತೆ. (ಮೂಳೆರೋಗ, ಮಧುಮೇಹ, ಹರ್ನಿಯ, ಮೂತ್ರಕೋಶ ಸಂಬಂಧಿಸಿದ ರೋಗಗಳು.)

6. ಚಂದ್ರನು 10ರಲ್ಲಿ, ಕುಜನು 7ರಲ್ಲಿ, ಶನಿಯು 2ರಲ್ಲಿ (ರವಿಯಿಂದ) ಇದ್ದರೆ ಜಾತಕನಿಗೆ ಪಾರ್ಶ್ವವಾಯು ಅಥವಾ ವಾಯುರೋಗಗಳುಂಟಾಗುತ್ತೆ.

7. ಲಗ್ನದಲ್ಲಿ ಚಂದ್ರ, 7ರಲ್ಲಿ ರವಿ, 12 ಮತ್ತು 2ರಲ್ಲಿ ಕುಜ ಮತ್ತು ಶನಿ ಇವರಿದ್ದರೆ ಕುಷ್ಠರೋಗ ಸಂಭವಿಸುತ್ತೆ.

8. ಚಂದ್ರನು ಎರಡು ಕ್ರೂರಗ್ರಹಗಳ ಮಧ್ಯೆಯಿದ್ದು (ಕುಜ ಮತ್ತು ಶನಿ ಇವರ ಮಧ್ಯೆ) ಮತ್ತು ರವಿಯು ಮಕರ ರಾಶಿಯಲ್ಲಿದ್ದರೆ ಕ್ಷಯ, ಗೂರಲು, ಶ್ವಾಸಕೋಶದಲ್ಲಿ ನೀರು ಸೇರುವುದು, ಕಂಠಮಾಲೆ ಇತ್ಯಾದಿ ಎದೆಯ ಮೇಲ್ಭಾಗದ ರೋಗಗಳುಂಟಾಗುತ್ತೆ.

9. ರವಿ ಮತ್ತು ಚಂದ್ರನು ಒಟ್ಟಿಗೆ ಕೂಡಿ ಸಿಂಹ ಅಥವ ಕಟಕ ರಾಶಿಯಲ್ಲಿ ಇದ್ದರೆ ದೀರ್ಘವಾದ ಖಾಯಿಲೆಯಿಂದ ನರಳುತ್ತಾರೆ ಮತ್ತು ಯಾವುದಾದರೊಂದು ಅಂಗಾಂಗದಲ್ಲಿ ನಿಶ್ಶಕ್ತಿಯಿರುವುದು.

10. ಒಬ್ಬರ ಜನ್ಮಕಾಲದಲ್ಲಿ ಚಂದ್ರನು ಧನುಸ್ಸಿನ ಮಧ್ಯಭಾಗದಲ್ಲಿದ್ದು (5ನೇ ನವಾಂಶದಲ್ಲಿ) ಕುಜ ಮತ್ತು ಶನಿಗಳಿಂದ ಕೂಡಿದ್ದರೆ ಅಥವ ಅವರುಗಳಿಂದ ದೃಷ್ಟಿಸಲ್ಪಟ್ಟಿದ್ದರೆ (ಒಟ್ಟಿಗೆ ಇಲ್ಲವೇ ಬೇರೆಯಾಗಿ) ಕುಷ್ಠರೋಗ ಪ್ರಾಪ್ತಿಯಾಗುತ್ತೆ.

11. ಚಂದ್ರನು ಮೇಲೆ ತಿಳಿಸಿದ ಗ್ರಹಗಳೊಡನೆ ಕೂಡಿ ಅಥವ ದೃಷ್ಟಿಸಲ್ಪಟ್ಟು ನವಾಂಶದಲ್ಲಿ ಮೀನ, ಕಟಕ, ಮಕರ ಅಥವ ಮೇಷದಲ್ಲಿ ಸ್ಥಿತನಾದರೆ ಕುಷ್ಠರೋಗ ಪ್ರಾಪ್ತಿಯಾಗುತ್ತೆ.

12. ಲಗ್ನದಿಂದ 5 ಅಥವ 9ನೇ ಭಾವವು ವೃಷಭ, ಕಟಕ, ವೃಶ್ಚಿಕ ಮತ್ತು ಮಕರ ರಾಶಿಗಳಾಗಿದ್ದು ಎಲ್ಲ ಕ್ರೂರಗ್ರಹಗಳಿಂದ ಕೂಡಲ್ಪಟ್ಟಿದ್ದರೆ ಅಥವ ದೃಷ್ಟಿಗೆ ಒಳಗಾಗಿದ್ದರೆ ಕುಷ್ಠರೋಗವುಂಟಾಗುತ್ತೆ.

13. ರವಿ, ಚಂದ್ರ, ಕುಜ ಮತ್ತು ಶನಿಗಳು 2, 6, 8, 12 ಈ ಭಾವಗಳಲ್ಲಿ ಸ್ಥಿತರಾಗಿದ್ದರೆ ಕಣ್ಣನ್ನು ಅಥವ ವಾತ, ಪಿತ್ತ ಕಫದ ದೋಷದಿಂದ ಕಣ್ಣಿನ ದೃಷ್ಟಿ ಕಳೆದುಕೊಳ್ಳುವರು. (ಅತ್ಯಂತ ಬಲಶಾಲಿಯಾದ ಗ್ರಹದ ದೋಷ ಪ್ರಧಾನ ಕಾರಣವಾಗುತ್ತೆ.)

14. ಕ್ರೂರ ಗ್ರಹಗಳು 3, 5, 9 ಮತ್ತು 11ರಲ್ಲಿ ಯಾವುದೇ ಕ್ರಮದಲ್ಲಿ ಸ್ಥಿತರಾಗಿದ್ದರೂ ಕರ್ಣರೋಗ (ಕಿವುಡು) ಉಂಟಾಗುತ್ತೆ.

15. ಕ್ರೂರ ಗ್ರಹಗಳು 7ರಲ್ಲಿದ್ದು ಶುಭ ಗ್ರಹಗಳ ದೃಷ್ಟಿಗೊಳಗಾದರೆ ದಂತರೋಗ ಉಂಟಾಗುತ್ತೆ.

16. ಚಂದ್ರನು ರಾಹುವಿನೊಡನೆ ಸೇರಿ ಲಗ್ನದಲ್ಲಿದ್ದು, 5 ಮತ್ತು 9ನೇ ಭಾವಗಳಲ್ಲಿ ಕ್ರೂರಗ್ರಹಗಳು ಸ್ಥಿತರಾಗಿದ್ದರೆ ದೆವ್ವ-ಭೂತಗಳಿಂದ ನರಳುತ್ತಾರೆ.

17. ಗುರು ಲಗ್ನದಲ್ಲೂ, ಶನಿ 7ರಲ್ಲೂ ಇದ್ದರೆ ವಾತರೋಗ ಮತ್ತು ಶ್ಲೇಷ್ಮರೋಗದಿಂದ ನರಳುವರು.

18. ಲಗ್ನದಲ್ಲಿ ಗುರು, 7ರಲ್ಲಿ ಕುಜನಿದ್ದರೆ ಮೂರ್ಛೆರೋಗವುಂಟಾಗುತ್ತದ (ಹುಚ್ಚು).

19. ಲಗ್ನದಲ್ಲಿ ಶನಿ, 5, 7 ಅಥವ 9ನೇ ಭಾವದಲ್ಲಿ ಕುಜನಿದ್ದರೆ ಮೂರ್ಛೆ ರೋಗವುಂಟಾಗುತ್ತದೆ.

20. ಕ್ಷೀಣ ಚಂದ್ರನು ಶನಿಯೊಂದಿಗೆ ಸೇರಿ 12ನೇ ಭಾವದಲ್ಲಿದ್ದರೆ ಮೂರ್ಛೆರೋಗವುಂಟಾಗುತ್ತದೆ.

21. ಮೇಷ, ವೃಷಭ ಅಥವ ಧನಸ್ಸು ಲಗ್ನವಾಗಿದ್ದು ಕ್ರೂರಗ್ರಹಗಳಿಂದ ದೃಷ್ಟಿಸಲ್ಪಟ್ಟರೆ ವಕ್ರದಂತವುಂಟಾಗುತ್ತೆ.

22. ಮೇಷ, ವೃಷಭ, ಸಿಂಹ, ವೃಶ್ಚಿಕ, ಧನಸ್ಸು, ಮಕರ, ಕುಂಭವು ಲಗ್ನವಾಗಿದ್ದು ಕ್ರೂರಗ್ರಹಗಳಿಂದ ನೋಡಲ್ಪಟ್ಟರೆ ಬೊಕ್ಕತಲೆವುಂಟಾಗುತ್ತೆ.

23. ರವಿಯು 5 ಅಥವ 9ರಲ್ಲಿದ್ದು ಕ್ರೂರಗ್ರಹಗಳಿಂದ ನೋಡಲ್ಪಟ್ಟರೆ ದೃಷ್ಟಿಮಾಂದ್ಯವುಂಟಾಗುವುದು.

24. ಶನಿಯು 5 ಅಥವ 9ನೇ ಸ್ಥಾನದಲ್ಲಿದ್ದು ಕ್ರೂರಗ್ರಹಗಳಿಂದ ನೋಡಲ್ಪಟ್ಟರೆ ನಾನಾ ರೋಗಗಳುಂಟಾಗುವುವು.

25. ಕುಜನು 5 ಅಥವ 9ನೇ ಸ್ಥಾನದಲ್ಲಿದ್ದು ಕ್ರೂರ ಗ್ರಹಗಳಿಂದ ದೃಷ್ಟಿಸಲ್ಪಟ್ಟರೆ ಅಪಘಾತವುಂಟಾಗಿ ಯಾವುದಾದರೊಂದು ಅಂಗಕ್ಕೆ ಶಾಶ್ವತವಾದ ಧಕ್ಕೆಯುಂಟಾಗುವುದು.

26. ಶನಿ ಮತ್ತು ಚಂದ್ರರಿಬ್ಬರೂ ಒಟ್ಟಿಗೆ ಸೇರಿದರೆ ಕಠಿನ ವಾಕ್ಕುಳ್ಳವರು ಆಗುತ್ತಾರೆ.

27. ಶನಿ ಮತ್ತು ಚಂದ್ರರು ಒಟ್ಟುಗೂಡಿ ಕುಜನ ದೃಷ್ಟಿಗೊಳಗಾದರೆ ಮೂರ್ಛೆರೋಗ ಅಥವ ಮಾತು ತೊದಲುವಿಕೆಯುಂಟಾಗುವುದು.

## ರೋಗ ನಿವಾರಣೆಗೆ ರತ್ನ ರಸಾಯನ

ರತ್ನಗಳ ಭಸ್ಮದಿಂದ ಯಾವ ರೋಗವನ್ನು ಗುಣಪಡಿಸಲು ಸಾಧ್ಯವೆಂದು ಹಿಂದಿನ ಅಧ್ಯಾಯಗಳಲ್ಲಿ ತಿಳಿಸಲಾಗಿದೆ. ಅಧ್ಯಾಯ 18ರಲ್ಲಿ ಹೇಗೆ ರತ್ನದಲ್ಲಿರುವ ವರ್ಣಗಳಿಗೂ, ಶರೀರವರ್ಣಗಳಿಗೂ, ಬಾಹ್ಯದಲ್ಲಿರುವ ಸಪ್ತ ವರ್ಣಗಳಿಗೂ ಸಂಬಂಧವಿದೆ. ಮತ್ತು ಯಾವ ವರ್ಣಕಿರಣದಿಂದ ಯಾವ ರೋಗ ನಿವಾರಿಸ ಬಹುದೆಂದು ತಿಳಿಸಲಾಗಿದೆ. ಆಯುರ್ವೇದಶಾಸ್ತ್ರ ರೀತ್ಯ ರೋಗೋತ್ಪತ್ತಿಗೆ ಕಾರಣಗಳನ್ನು ವಿವರಿಸಲಾಗಿದೆ. ಹೇಗೆ ಜ್ಯೋತಿಶಾಸ್ತ್ರದ ರೀತ್ಯ ರೋಗಗಳು ಗ್ರಹಗಳ ದುಷ್ಟ ಪ್ರಭಾವದಿಂದುಂಟಾಗುವುದು ಎಂದು ಈಗಾಗಲೇ ತಿಳಿದಿರುವಿರಿ.

ವರ್ಣಕಿರಣಗಳ ಠಾಣ್ಯ ರತ್ನಗಳು. ನಿಸರ್ಗದ ಕಿರಣನಿಧಿ ಎಂದರೆ ರತ್ನಗಳು. ಗೋಪ್ಯವಾಗಿ ತಮ್ಮ ಪ್ರಭಾವವನ್ನು ಆಭರಣದಲ್ಲಿ ಖಚಿತಪಡಿಸಿ ಅದೃಷ್ಟವನ್ನು ಒದಲಾಯಿಸಿಕೊಳ್ಳಬಹುದೋ ಅದರ ವಿವರಣೆಯೂ ಅಧ್ಯಾಯ 5ರಲ್ಲಿ ತಿಳಿಸಲಾಗಿದೆ.

ಈ ರತ್ನಗಳಲ್ಲಿ ಅಡಗಿರುವ ವರ್ಣಕಿರಣಗಳನ್ನು ಸೆರೆಹಿಡಿದು ಅತಿಸುಲಭ ಖರ್ಚಿನಲ್ಲಿ ಗುಳಿಗೆಗಳನ್ನು ತಯಾರಿಸಬಹುದು. ಮತ್ತು ಯಾವ ಭಾಷೆಯೂ ಇಲ್ಲದೆ ದುಷ್ಪರಿಣಾಮಗಳೂ ಆಗದೆ ಸುಲಭರೀತ್ಯ ಚಿಕಿತ್ಸೆ ನೀಡಲು ಸಾಧ್ಯವೆಂದು ಇಲ್ಲಿ ತಿಳಿಸಲಾಗಿದೆ. ಇದನ್ನು ನಾವು "ರತ್ನಕಿರಣ ಚಿಕಿತ್ಸಾ ಕ್ರಮ"ವೆಂದರೆ ತಪ್ಪಾಗದು.

ನಿಸರ್ಗದಲ್ಲಿ ದೊರಕುವ ಮಾಣಿಕ್ಯ, ಮುತ್ತು, ಹವಳ, ಪಚ್ಚೆ, ಪುಷ್ಪರಾಗ, ವಜ್ರ, ಗೋಮೇಧಿಕಾ ಮತ್ತು ವೈಢೂರ್ಯದಲ್ಲಿ ಕ್ರಮವಾಗಿ ಕೆಂಪು, ಬಿಳುಪು, ರಕ್ತಕೆಂಪು, ಹಸಿರು, ಹಳದಿ, ಜೇನುತುಪ್ಪದ ಬಣ್ಣ, ಬೆಕ್ಕಿನ ಕಣ್ಣಿನಂತಿರುವ ಕಪ್ಪು ಬಿಳಿ ವರ್ಣ ಹೊರರೂಪಕ್ಕೆ ಕಾಣುತ್ತವೆ. ಇವುಗಳನ್ನು ತ್ರಿಮುಖ ಗಾಜಿನ ಮೂಲಕ ಬೆಳಕಿನಲ್ಲಿ ನೋಡಿದಾಗ ಇವುಗಳಿಂದ ವಿಶಿಷ್ಟ ವರ್ಣಗಳ ಕಿರಣಗಳನ್ನು ಸೂಸುತ್ತವೆ.

### ರತ್ನಕಿರಣ ಸೆರೆಹಿಡಿಯುವ ವಿಧಾನ ಹಾಗೂ ರತ್ನಗುಟಿಕಾ ತಯಾರಿಕೆ ಕ್ರಮ

1. ಸುಮಾರು ಎರಡು ರತ್ತಿ ತೂಕದ ಪ್ರತಿಯೊಂದು ನೈಜರತ್ನವನ್ನು ತೆಗೆದುಕೊಂಡು ಒಂದು ಶುದ್ಧಿಮಾಡಲ್ಪಟ್ಟ ಗಾಜಿನ ಸಣ್ಣ ಸೀಸೆಯಲ್ಲಿ ಹಾಕಿ. ಆ ಸೀಸೆಯು ವರ್ಣವೂ ರತ್ನದ ಬಣ್ಣಕ್ಕೆ ಸುಮಾರು ಹೋಲಿಕೆಯುಳ್ಳದ್ದಾದರೆ ಮತ್ತೂ ಶ್ರೇಷ್ಠ. ಅದು ಸಿಗದಾಗ ಬಿಳಿ ಗಾಜಿನ ಸೀಸೆಗಳೆ ಆಗಬಹುದು.

2. ನಂತರ ಈ ಸೀಸೆಗಳಿಗೆ ಒಂದು ಔನ್ಸ್ ಶುದ್ಧ ಮದ್ಯಸಾರವನ್ನು ತುಂಬಿ ಬಿರುಟೆಯನ್ನು ಗಟ್ಟಿಯಾಗಿ ಮುಚ್ಚಿಡಿ.

3. ಈ ಸೀಸೆಯನ್ನು ಬಾಹ್ಯ ಶಾಖದಿಂದ, ಬೆಳಕಿನಿಂದ ದೂರವಿಡಬೇಕು. ಅಂದರೆ ಕತ್ತಲೆ ಕೋಣೆಯಲ್ಲಿ ಮರದ ಇಲ್ಲವೆ ಗಾಜಿನ ಬೀರುವಿನಲ್ಲಿ ಒಂದು ವಾರಕಾಲ ಶೇಖರಿಸಿಡುವುದು.

4. ಒಂದು ವಾರದ ನಂತರ ಈ ಸೀಸೆಯಲ್ಲಿರುವ ಮದ್ಯಸಾರವನ್ನು ಮತ್ತೊಂದು ಸೀಸೆಗೆ ಹಾಕಿ. (ಅಥವ ರತ್ನವನ್ನು ಹೊರಗೆ ತೆಗೆದು ಕೇವಲ ಮದ್ಯಸಾರವನ್ನು ಉಳಿಸಿಕೊಳ್ಳಿ.)

5. ಇದರಲ್ಲಿ ಟೊಳ್ಳು ಗುಳಿಗೆ ನಂ. 20ನ್ನು ಆ ಸೀಸೆಗೆ ತುಂಬುವುದು. ನಂತರ ಚೆನ್ನಾಗಿ ಕಲಕುವುದು. ಈಗ ನಮ್ಮ ಇಚ್ಛಿತ ರತ್ನದ ಕಿರಣ ಪ್ರಸಾರಿತವಾದ ಗುಳಿಗೆಗಳು ಚಿಕಿತ್ಸೆಗೆ ಸಿದ್ಧ. ಇದೇ ರೀತಿಯಲ್ಲಿ ಯಾವುವೇ ರತ್ನದ ಕಿರಣ ಪ್ರಭಾವವುಳ್ಳ ಗುಳಿಗೆಗಳನ್ನು ತಯಾರಿಸಿ ಶೇಖರಿಸಬಹುದು. ಹೀಗೆಯೇ ಒಂಭತ್ತು ರತ್ನಗಳನ್ನು ಅಂದರೆ ಮಾಣಿಕ್ಯ, ಮುತ್ತು, ಹವಳ, ಪಚ್ಚೆ, ಪುಷ್ಪರಾಗ, ವಜ್ರ, ನೀಲ, ಗೋಮೇಧಿಕಾ ಮತ್ತು ವೈಢೂರ್ಯ ಈ ಒಂಭತ್ತು ರತ್ನಗಳನ್ನು ಒಂದೇ ಸೀಸೆಯಲ್ಲಿ 2 ರತ್ತಿ ತೂಕದಷ್ಟು ಹಾಕಿ ಮದ್ಯಸಾರದಲ್ಲಿಟ್ಟರೆ ಒಂದುವಾರ ನಂತರ ಆ ರತ್ನಗಳಿಂದ ಮದ್ಯಸಾರ ಬೇರ್ಪಡಿಸಿ ಅದಕ್ಕೆ ಟೊಳ್ಳು ಗುಳಿಗೆ 20ನ್ನು ತುಂಬಿಸಿ ಕಲಕಿದರೆ ನವರತ್ನಗಳ ಗುಳಿಗೆ ತಯಾರಾಗುವುದು. ಇದು ನಾನಾ ರೋಗಗಳು ಒಮ್ಮೆಲೆ ಕಾಡಿಸುತ್ತಿರುವಾಗ ಉಪಯುಕ್ತವಾಗಿ ಕಂಡುಬಂದಿದೆ.

**ಪ್ರಮಾಣ ದೊಡ್ಡವರಿಗೆ :** 20ನೇ ನಂಬರಿನ ರತ್ನ ಪ್ರಭಾವಿಕ ಗುಳಿಗೆಗಳನು ಹೊತ್ತಿಗೆ 4 ರಂತೆ ದಿನಕ್ಕೆ 4 ಬಾರಿ ಸೇವಿಸಬೇಕು.

**ಮಕ್ಕಳಿಗೆ :** 20ನೇ ನಂಬರಿನ ರತ್ನಪ್ರಭಾವಿಕ ಗುಳಿಗೆಗಳನ್ನು ಹೊತ್ತಿಗೆ 2 ರಂತೆ ದಿನಕ್ಕೆ 4 ಬಾರಿ ಸೇವಿಸಬೇಕು. (10 ವರ್ಷ ವಯಸ್ಸಿನವರಿಗೆ ಮಕ್ಕಳೆಂದು ಪರಿಗಣಿಸಿ) ರೋಗ ವೈಪರೀತ್ಯವಿದ್ದಲ್ಲಿ ದಿನಕ್ಕೆ 6 ಬಾರಿ ಸೇವಿಸಬೇಕು.

**ಯಾವ ರತ್ನದ ಗುಳಿಗೆ ಯಾವ ರೀತಿಯ ರೋಗಕ್ಕೆ ಗುಣಕಾರಿ**

**ಮಾಣಿಕ್ಯ ಗುಳಿಗೆ :** ರಕ್ತಹೀನತೆ, ವಾತರೋಗಗಳು, ಮಲಬದ್ಧತೆ, ನಿಶ್ಶಕ್ತಿ, ಹೃದಯದ ಒಳಪೊರೆಯಲ್ಲಿ ಉರಿ, ರಕ್ತದ ಒತ್ತಡ ಕಡಿಮೆಯಾಗಿರುವುದು, ಮಕ್ಕಳಿಗೆ ಬರುವ ಸೆಳೆತ, ಹೃದಯ ಸಂಬಂಧಿಸಿದ ನಾನಾ ರೋಗಗಳು, ಪಾರ್ಶ್ವವಾಯು, ಅನಾರ್ತವ ಮತ್ತು ಪೋಲಿಯೋ ರೋಗಿಗಳಿಗೆ ಕೊಟ್ಟರೆ ಗುಣಕಾರಿ.

**ಮುತ್ತಿನ ಗುಳಿಗೆ :** ವಿಷಮಶೀತಜ್ವರ, ಮಲೇರಿಯಾ, ಮಾನಸಿಕ ದುಗುಡತೆ. ಅತೀವ ವ್ಯಥೆ, ಮೆದುಳಿನ ಪೊರೆಯ ಶೋಥ, ರಕ್ತಪ್ರದರ, ಸಿಡಿಬು, ಬಾವು,

ಸಾಂಸರ್ಗಿಕ ವಿಷಮಜ್ವರ, ರಕ್ತಮೂತ್ರ, ರಕ್ತಸ್ರಾವ, ಶ್ವಾಸಕೋಶದ ರೋಗಗಳು, ಹುಚ್ಚು, ಉನ್ಮಾದ, ನಿದ್ರಾನಾಶ, ಭಯ, ಮನೋದ್ವೇಗ, ಕನಸುಗಳು, ವಿಪರೀತ ಕೋಪ, ಗೂರಲು, ಅಭಿಷ್ಯಂಧ, ಆಮ್ಲಪಿತ್ತ ಮತ್ತು ಅನೇಕ ರೀತಿಯ ಮಾನಸಿಕ ರೋಗಗಳಿಗೆ ಗುಣಪಡಿಸಲು ಉಪಯುಕ್ತವಾಗಿ ಕಂಡುಬಂದಿದೆ.

**ಹವಳದ ಗುಳಿಗೆ** : ಪಿತ್ತವಿಕಾರದ ದೋಷಗಳು, ಕಾಮಾಲೆ, ಜಠರ ವ್ಯಾಧಿಗಳು, ಮಶಕ, ಗ್ರಂಥಿರೋಗಗಳು, ಮಾಂಸಖಂಡದಲ್ಲಿ ಉರಿ, ಚಳುಕು, ಅಜೀರ್ಣ ವ್ಯಾಧಿಗಳು, ಮೊಳೆರೋಗ, ಕುಷ್ಠ, ಚರ್ಮರೋಗಗಳು ಇತ್ಯಾದಿಗಳಿಗೆ ಗುಣಪಡಿಸಲು ಉಪಯುಕ್ತವಾಗಿ ಕಂಡುಬಂದಿದೆ.

**ಪಚ್ಚೆಯ ಗುಳಿಗೆ** : ಪಿತ್ತವಿಕಾರದ ಜ್ವರ, ಮಲಾವರೋಧ, ಉದರಶೂಲೆ, ಅತಿಸಾರ, ಹೊಟ್ಟೆಯಲ್ಲಿ ಹುಣ್ಣು, ಆಮಶಂಕೆ, ಅಗ್ನಿಮಾಂದ್ಯ, ವಾತಪ್ರಕೋಪ, ಉದರವಾತ, ಹೃದಯದಲ್ಲಿ ಉರಿ, ಅಜೀರ್ಣ, ವಾಕರಿಗೆ ಇತ್ಯಾದಿ ರೋಗಗಳ ನಿವಾರಣೆಗೆ ಉಪಯುಕ್ತವಾಗಿ ಕಂಡುಬಂದಿದೆ.

**ಪುಷ್ಪರಾಗದ ಗುಳಿಗೆ** : ನಾಯಿಕೆಮ್ಮು, ಕೆಪ್ಪಡ, ಸ್ಥೂಲದೇಹ, ಮೇದೋಜೀರಕದ ರೋಗ, ಗಲಗಂಡ, ಗ್ರಂಥಿಬಾವು, ಕಿವುಡು, ಸ್ವರಘ್ನ, ಕಾಸ, ಉಸಿರಾಟದ ತೊಂದರೆಗಳು ಇತ್ಯಾದಿ ರೋಗಗಳನ್ನು ಗುಣಪಡಿಸಲು ಉಪಯುಕ್ತ.

**ವಜ್ರದ ಗುಳಿಗೆ** : ಚರ್ಮರೋಗ, ಗಜಕರ್ಣ, ಇಸಬು, ಶುಕ್ರಮೇಹ, ಧಾತುಸ್ರಾವ, ವಂಧ್ಯತ್ವ, ತೊನ್ನು, ಶ್ವೇತಪ್ರದರ, ಮಧುಮೇಹ, ಅಪಸ್ಮಾರ, ನಾಡಿವ್ರಣ, ಸನ್ನಿರೋಗ ಇತ್ಯಾದಿ ರೋಗಗಳಿಗೆ ಗುಣಕಾರಿ.

**ನೀಲ ಗುಳಿಗೆ** : ಬೆನ್ನುನೋವು, ಪಾರ್ಶ್ವವಾಯು, ತಲೆಯಲ್ಲಿ ಹೊಟ್ಟು ಉದುರುವುದು, ಮಾಸಿಕ ಋತುದೋಷ, ಸಿಡಿಬು, ನಾನಾ ಉರಿ, ತಲೆನೋವು, ವಾತರಕ್ತ, ಸ್ವರಗ್ರಂಥಿಯ ಶೋಥ, ಕುಷ್ಠ, ಕಟಿಶೂಲೆ, ವಾತಶೂಲೆ, ಹೃದಯ ಚೀಲದಲ್ಲಿ ಉರಿ, ಶಿರೋಭ್ರಮಣ, ಗೃಧ್ರಸಿ ಇತ್ಯಾದಿ ರೋಗಗಳಿಗೆ ಗುಣಕಾರಿ.

**ಗೋಮೇಧಿಕಾ ಗುಳಿಗೆ** : ಭೂತ, ದೆವ್ವ, ಪಿಶಾಚ ಭಯ, ಮಹಾಕುಷ್ಠ, ವಾಮಾಚಾರ ಪ್ರಯೋಗ, ಹೃದಯ ವಿಕಾರ, ರಕ್ತಒತ್ತಡ ಕಡಿಮೆಯಿರುವುದು, ಮೋಹಿನಿ, ಗುಪ್ತಾಂಗದಲ್ಲಿ ನೋವು, ಗೂರಲು, ಕ್ಷಯ, ನಾನಾ ರೀತಿಯ ನೋವುಗಳನ್ನು ಗುಣಪಡಿಸಲು ಉಪಯುಕ್ತ.

**ವೈಢೂರ್ಯದ ಗುಳಿಗೆ** : ರಕ್ತಪಿತ್ತ, ನೇತ್ರರೋಗ, ಮೆದುಳಿನಜ್ವರ, ಅರ್ಬುದ ರೋಗ, ಹೊಟ್ಟೆಯುಬ್ಬರ ಇತ್ಯಾದಿ ರೋಗಗಳಿಗೆ ಗುಣಕಾರಿ.

**ರತ್ನಗುಳಿಗೆಗಳ ವೈಶಿಷ್ಟ್ಯ – ಬಡವರ ಸಂಜೀವಿನಿ**

1) ರತ್ನಗಳ ಗುಳಿಗೆಗಳು ಇತರ ಯಾವುದೇ ಚಿಕಿತ್ಸೆ ಕ್ರಮಕ್ಕಿಂತಲೂ ಸುಲಭವಾಗಿ ಪಡೆಯಬಹುದು. ಕೆಲವೇ ರೂಪಾಯಿಗಳನ್ನು ಖರ್ಚುಮಾಡಿ ರೋಗ ನಿವಾರಿಸಲು ಸಾಧ್ಯ.

2) ಔಷಧಿ ಪ್ರಯೋಗದ ನಂತರ ಯಾವುದೇ ದುಷ್ಪರಿಣಾಮ ಬೀರದು.

3) ಒಮ್ಮೆ ರತ್ನಗಳನ್ನು ಕೊಂಡಲ್ಲಿ ಅಗತ್ಯವಿದ್ದಾಗಲೆಲ್ಲಾ ಗುಳಿಗೆಗಳನ್ನು ತಯಾರಿಸಿ ಸಹಸ್ರಾರು ರೋಗಿಗಳಿಗೆ ಕೊಡಬಹುದು.

4) ವೈದ್ಯರ ಸಹಾಯವಿಲ್ಲದೆಯೇ ರತ್ನಗುಳಿಗೆಗಳನ್ನು ತಯಾರುಮಾಡಬಹುದು.

5) ಔಷಧಿ ಪ್ರಮಾಣ ಸ್ವಲ್ಪ ಹೆಚ್ಚು ಅಥವ ಕಡಿಮೆಯಾದರೆ ಬಾಧಕವಿರದು.

6) ಗುಳಿಗೆಗಳನ್ನು ಇಷ್ಟೇ ಬಾರಿ ತೆಗೆದುಕೊಳ್ಳಬೇಕೆಂಬ ನಿಯಮವಿಲ್ಲ. ಅಗತ್ಯ ಕಂಡುಬಂದಲ್ಲಿ 4 ರಿಂದ 6 ಬಾರಿ ತೆಗೆದುಕೊಳ್ಳಬಹುದು.

7) ಗುಳಿಗೆಗಳನ್ನು ನುಂಗಲು ಸುಲಭವಾಗಿರುತ್ತೆ. ಸೂಜಿ ಮದ್ದಿನ ನೋವು ಔಷಧಿ ಸೇವನೆಗಳಿಂದಾಗುವ ವಿಕಾರಗಳು, ನಾಲಿಗೆಗೆ ಕಹಿಯಾಗುವುದು ಈ ರೀತಿ ದೋಷಗಳಿರುವುದಿಲ್ಲ.

8) ರೋಗ ಗುಣಮುಖವಾಗುವವರೆಗೆ ಔಷಧಿ ಸೇವನೆ ಮಾಡಬಹುದು. ನಂತರವೂ ಒಂದು ವಾರ ಕಾಲ ಮಾಡಿದಲ್ಲಿ ಬಹಳ ಉಪಯುಕ್ತ ಗುಣ ಕಂಡುಬಂದಿದೆ.

9) ರೋಗದ ವಿಚಾರವಾಗಿ ಖಚಿತ ನಿರ್ಧಾರವಾಗದೆ ಇದ್ದ ಸಂದರ್ಭದಲ್ಲಿ ನವರತ್ನ ಮಿಶ್ರಿತ ಗುಳಿಗೆಗಳನ್ನು ಇದೇ ಪ್ರಮಾಣದಲ್ಲಿ ಕೊಟ್ಟು ಉತ್ತಮ ಗುಣಕಾರಿಯಾಗಿ ಕೆಲಸಮಾಡುವುದನ್ನು ಪ್ರಯೋಗಮಾಡಿ ನೋಡಬಹುದು.

10) ಆಯುರ್ವೇದದಲ್ಲಿ ಹೇಳಿರುವ ರೋಗಗಳ ಸಂಬಂಧಿಸಿದ ಪಥ್ಯವನ್ನು ಮಾತ್ರ ಅನುಸರಿಸಬೇಕು.

**ದೆಹಲಿಯ ಖ್ಯಾತ ಜ್ಯೋತಿಷಿ ಶ್ರೀ ಜೆ. ಎನ್. ಬಾರ್ಸಿರವರು ರತ್ನಬಳಕೆಯಿಂದ ರೋಗ ನಿವಾರಣೆಗೆ ಇತ್ತಿರುವ ಸಲಹೆ**

ರೋಗಮುಕ್ತ ಜೀವನವನ್ನು ರತ್ನಗಳಿಂದ ಪಡೆಯಲು ದೆಹಲಿಯ ಖ್ಯಾತ ಜ್ಯೋತಿಷಿ ಶ್ರೀ ಜೆ. ಎನ್. ಬಾರ್ಸಿರವರು ತಮ್ಮ ಗ್ರಂಥ "ಮೆಡಿಕಲ್ ಆಸ್ಟ್ರಾಲಜಿ" ಎಂಬುದರಲ್ಲಿ ನಾನಾ ರೋಗಗಳ ಗುಣಪಡಿಸಿಕೊಳ್ಳಲು ಯಾವ ರೀತಿ ರತ್ನ ಧರಿಸಬೇಕು ಎಂಬ ವಿಚಾರವಾಗಿ ಹದಿನೈದು ಸೂತ್ರಗಳನ್ನು ಜ್ಯೋತಿಶ್ಶಾಸ್ತ್ರದ ತತ್ವಗಳ ಆಧಾರ ಸಹಿತವಾಗಿ ವಿವರಿಸಿದ್ದಾರೆ. ಅದರ ಸಂಕ್ಷಿಪ್ತ ವಿವರಣೆ ಇಲ್ಲಿದೆ—

1. ಜಾತಕದ ಯಾವುದೇ ಭಾವದಲ್ಲಿ ಕ್ರೂರ ಗ್ರಹಗಳು ಸ್ಥಿತರಾಗಿದ್ದಲ್ಲಿ ಅಥವ ಕ್ರೂರಗ್ರಹದ ದೃಷ್ಟಿ, ಸಂಯೋಗಗಳಿಂದ ಸಂಬಂಧ ಹೊಂದಿದ್ದಲ್ಲಿ ಆ ಭಾವವು ಕೆಡುವುದು, ಆ ಭಾವವು ಕೆಲ ಪುರುಷನ ಯಾವ ಅಂಗವನ್ನು ಸೂಚಿಸುವುದೋ ಆ ಶರೀರದ ಭಾಗಕ್ಕೆ ರೋಗ ಉಂಟಾಗುವುದು. ಶುಭ ಗ್ರಹ ಸಂಪರ್ಕವಿದ್ದರೆ ದೋಷ ನಿವಾರಿಸಲ್ಪಡುವುದು ಅಥವ ರೋಗ ಉಲ್ಬಣಗೊಂಡು ಗುಣಮುಖವಾಗದೆಯೇ ಮುಂದುವರಿದೀತು. ಈ ರೀತಿ ಶುಭಗ್ರಹದ ಸಂಬಂಧವಿರುವ ಕ್ರೂರಗ್ರಹವುಳ್ಳ ಭಾವಕ್ಕೆ ಸಂಬಂಧಿಸಿದ ರೋಗದಿಂದ ನರಳುತ್ತಿರುವ ವ್ಯಕ್ತಿಗೆ ಆ ಗ್ರಹ ಸಂಬಂಧಿತ ರತ್ನ ಧರಿಸಲು ಸಲಹೆ ಇತ್ತರೆ ರೋಗ ಗುಣವಾಗಲು ಸಾಧ್ಯ.

2. ವಿಶ್ವದ ಯಾವುದೇ ವಸ್ತುವಿಗಿರುವಂತೆಯೇ ಗ್ರಹಗಳಿಗೂ ರತ್ನಗಳಿಗೂ ಸಂಬಂಧವಿರುತ್ತೆ. ಸೂರ್ಯನಿಗೆ-ಮಾಣಿಕ್ಯ, ಚಂದ್ರನಿಗೆ-ಮುತ್ತು, ಕುಜನಿಗೆ – ಹವಳ, ಬುಧನಿಗೆ-ಪಚ್ಚೆ, ಗುರುವಿಗೆ-ಪುಷ್ಪರಾಗ, ಶುಕ್ರನಿಗೆ-ವಜ್ರ, ಶನಿಗೆ-ನೀಲ, ರಾಹುವಿಗೆ-ಗೋಮೇಧಿಕಾ ಮತ್ತು ಕೇತುವಿಗೆ-ವೈಢೂರ್ಯ ಹೀಗಿದೆ ಗ್ರಹ-ರತ್ನ ಸಂಬಂಧ.

3. ಯಾವುದೇ ವ್ಯಕ್ತಿ ಒಂದು ರತ್ನ ಧರಿಸಿದ್ದಲ್ಲಿ ಆ ರತ್ನ ಯಾವ ಗ್ರಹಕ್ಕೆ ಸಂಬಂಧಿಸಿದೆಯೋ ಆ ಗ್ರಹದ ಪ್ರಭಾವವನ್ನು ಹೆಚ್ಚುಗೊಳಿಸಿದಂತಾಗುವುದು. ಉದಾಹರಣೆಗೆ ಮಾಣಿಕ್ಯ ಧರಿಸುವುದರಿಂದ ಒಬ್ಬ ವ್ಯಕ್ತಿಗೆ ಅವನ ಜಾತಕದಲ್ಲಿ ಸೂರ್ಯನ ಪ್ರಭಾವವನ್ನು ವೃದ್ಧಿಸಿದಂತಾಗುವುದು. ಮುತ್ತು ಮತ್ತು ಬೆಳ್ಳಿಯನ್ನು ಒಬ್ಬ ವ್ಯಕ್ತಿ ಧರಿಸಿದರೆ ಚಂದ್ರನ ಬಲ ಹೆಚ್ಚಿಸಿಕೊಂಡಂತಾಗುವುದು. ಆದ್ದರಿಂದಲೇ ಇಂಬೇಕು ಚಂದ್ರನ ಬಲಹೀನವಾದ ಜಾತಕವುಳ್ಳ ಶಿಶುಗಳಿಗೆ ಬಾಲ್ಯಾವಸ್ಥೆಯಲ್ಲಿ ಉಂಟಾಗಬಹುದಾದ ರೋಗಗಳು ಬಾರದಂತೆ ತಡೆಯಲು "ಬೆಳ್ಳಿಯ ಚಂದ್ರನನ್ನು" ಮಾಡಿಸಿ ಧರಿಸಲು ಜ್ಯೋತಿಶ್ಶಾಸ್ತ್ರಜ್ಞರು ಸಲಹೆ ನೀಡುತ್ತಾರೆ. ಇದೇ ರೀತಿಯಲ್ಲಿ ಹವಳ ಧರಿಸಿದರೆ-ಕುಜನಿಗೆ, ಪಚ್ಚೆ ಧರಿಸಿದರೆ-ಬುಧನಿಗೆ, ಪುಷ್ಪರಾಗ ಧರಿಸಿದರೆ – ಗುರುವಿಗೆ, ವಜ್ರ ಧರಿಸಿದರೆ-ಶುಕ್ರನಿಗೆ, ನೀಲ ಧರಿಸಿದರೆ-ಶನಿಗೆ, ಗೋಮೇಧಿಕಾ ಧರಿಸಿದರೆ-ರಾಹುವಿಗೆ, ವೈಢೂರ್ಯ ಧರಿಸಿದರೆ-ಕೇತುವಿಗೆ ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳಲು ಧರಿಸಬಹುದಾಗಿದೆ.

4. ಯಾವುದೇ ವ್ಯಕ್ತಿಯ ಜಾತಕದಲ್ಲಿ ಯಾವೊಂದು ಗ್ರಹದ ಪ್ರಭಾವದಿಂದ ಶುಭ ಫಲ ಪಡೆಯಬೇಕಾಗಿದೆಯೋ ಅದನ್ನು ನಿರ್ಧರಿಸಬೇಕು. ಇದು ಅಷ್ಟು ಸುಲಭ ಕೆಲಸವಲ್ಲ. ಇದಕ್ಕೆ ನುರಿತ ಜ್ಯೋತಿಷ್ಯರ ಸಲಹೆ ಅತ್ಯಗತ್ಯ. ಅವಿದ್ಯಾವಂತ ಜ್ಯೋತಿಷ್ಯನ ಸಲಹೆ ಮೇರೆಗೆ ರತ್ನ ಕೊಂಡು ಉಂಗುರ ಇತ್ಯಾದಿಗಳಲ್ಲಿ ಧರಿಸಿಕೊಂಡರೆ ವಿರುದ್ಧ ಫಲಗಳುಂಟಾಗುವ ಸಾಧ್ಯತೆ ಇರುತ್ತೆ. ರತ್ನದ ಸಲಹೆ ಕೊಡಬೇಕಾದಲ್ಲಿ

ಜೋತಿಷಿಯು ಯಾವ ಗ್ರಹದ ಪ್ರಭಾವ ಅಗತ್ಯವೋ ಅವರೆ ನಿರ್ಧರಿಸಬೇಕು. ಅದು ಲಗ್ನದಿಂದ ಯಾವ ಭಾವಕ್ಕೆ ಅಧಿಕಾರವುಳ್ಳದ್ದು. ಅದರ ಬಲಾಬಲದೊಂದಿಗೆ ಇತರ ದುಷ್ಟ ಸ್ಥಾನ ಗ್ರಹಗಳ ಸಂಬಂಧವಿದೆಯೇ ಎಂದು ನಿರ್ಧರಿಸಬೇಕು.

5. ಪ್ರತಿಯೊಬ್ಬರ ಜಾತಕದಲ್ಲೂ ಲಗ್ನವೇ ಆಧಾರಸ್ತಂಭ; ಲಗ್ನ ಲಗ್ನಾಧಿಪತಿಯ ಬಲಾಬಲಗಳ ಮೇಲೆಯೇ ಭವಿಷ್ಯ ನಿರ್ಧರಿಸಲ್ಪಡುವುದು. ಲಗ್ನದ ಅಧಿಪತಿಯು ಹೀನವಾಗಿದ್ದ ಪಕ್ಷದಲ್ಲಿ ಅವನನ್ನು ಶಕ್ತಿಯುತನನ್ನಾಗಿ ಮಾಡಬೇಕು. ಅಂದರೆ ಅವನಿಗೆ ಸಂಬಂಧಿಸಿದ ರತ್ನವನ್ನು ಧರಿಸಿಕೊಳ್ಳಬೇಕು. ಇದರಿಂದ ಜಾತಕನ ಆಯುಷ್ಯ, ಆರೋಗ್ಯ, ಐಶ್ವರ್ಯ, ಪದವಿ, ಪ್ರತಿಷ್ಠೆಗಳು ಪ್ರಾಪ್ತಿಯಾಗುತ್ತವೆ. ಜಾತಕದ ಸಮಸ್ತ ಫಲದ ಅನುಭವಕ್ಕೆ ಲಗ್ನಾಧಿಪತಿಯೇ ಕಾರಣ. ಇವನೇ ಜಾತಕನ ವಿಧಿಗೆ ಅಧಿಕಾರವುಳ್ಳ ಗ್ರಹ. ಶುಭ ಸ್ಥಾನಾಧಿಪತಿ ಸಂಪರ್ಕ ಸ್ವಯಂ ಶುಭನಾಗಿರುವುದು, ಶುಭ ವರ್ಗಗಳಲ್ಲಿರುವುದು ಜಾತಕನ ಇಷ್ಟಾರ್ಥಸಿದ್ಧಿಗೆ ಕಾರಣವಾಗುತ್ತದೆ.

ವಿ. ಸೂ: ಅತ್ಯಂತ ಸುಲಭ ರೀತಿಯಲ್ಲಿ ಯಾವುದೇ ವ್ಯಕ್ತಿಯ ಜನನ ತಾರೀಖು, ಕಾಲ ಮತ್ತು ಜನಿಸಿದ ಯಾವುದೇ ಸ್ಥಳಕ್ಕೆ ಲಗ್ನ ಕಂಡುಹಿಡಿಯುವುದಕ್ಕೆ ನಮ್ಮ ಗ್ರಂಥ "ಒಂದೇ ನಿಮಿಷದಲ್ಲಿ ನಿಮ್ಮ ಲಗ್ನವನ್ನು ಸಾಧಿಸಿ" (Find Your Lagna In A Minute) ಎಂಬುದನ್ನು ಪರಿಶೀಲಿಸಿ.

ನಿಮ್ಮ ಲಗ್ನ ಅದಕ್ಕೆ ಸಂಬಂಧಿಸಿದ ಅಧಿಕಾರ ಗ್ರಹ ಯಾವುದು ಹಾಗೂ ಆ ಗ್ರಹದ ರತ್ನ ಯಾವುವೆಂದು ಈ ಕೆಳಗೆ ಕೊಟ್ಟಿರುವ ಪಟ್ಟಿಯಿಂದ ತಿಳಿಯಬಹುದು

| ಲಗ್ನ | ಲಗ್ನಾಧಿಪತಿ | ಸಂಬಂಧಪಟ್ಟ ರತ್ನ |
|---|---|---|
| ಮೇಷ ಅಥವಾ ವೃಶ್ಚಿಕ | ಕುಜ | ಹವಳ |
| ವೃಷಭ ಅಥವಾ ತುಲಾ | ಶುಕ್ರ | ವಜ್ರ |
| ಮಿಥುನ ಅಥವಾ ಕನ್ಯಾ | ಬುಧ | ಪಚ್ಚೆ |
| ಕಟಕ | ಚಂದ್ರ | ಮುತ್ತು |
| ಸಿಂಹ | ರವಿ | ಮಾಣಿಕ್ಯ |
| ಧನುಸ್ ಅಥವಾ ಮೀನ | ಗುರು | ಪುಷ್ಪರಾಗ |
| ಮಕರ ಅಥವಾ ಕುಂಭ | ಶನಿ | ನೀಲ |

ಪ್ರತಿಯೊಂದು ಲಗ್ನಕ್ಕೂ ಶುಭ ಗ್ರಹಗಳು, ಅಶುಭ ಗ್ರಹಗಳು ಯಾವುವೆಂದು ಜ್ಯೋತಿಶ್ಶಾಸ್ತ್ರದ ಮೂಲಪುರುಷರಾದ ಮಹರ್ಷಿ ಪರಾಶರರು ನಿರ್ಧರಿಸಿದ್ದಾರೆ. ಇಲ್ಲಿ ನೈಸರ್ಗಿಕ ಶುಭವನ್ನು ಅಥವ ನೈಸರ್ಗಿಕ ಪಾಪಿ ಗ್ರಹವನ್ನು ನೋಡುವುದಕ್ಕಿಂತಲೂ ಸ್ಥಾನಾಧಿಪತ್ಯದ ಪಾಪ ಶುಭ ನಿರ್ಣಯಿಸಿ ರತ್ನಗಳನ್ನು ಆ ಶುಭಗ್ರಹ ಅಂದರೆ ಯೋಗಕಾರಕ ಗ್ರಹಗಳಿಗೆ ಸಂಬಂಧಿಸಿದಂತೆ ಧರಿಸಿದಲ್ಲಿ ಹೆಚ್ಚು ಶುಭ ಫಲಗಳನ್ನು ಹೊಂದಬಹುದಾಗಿದೆ.

7. ಯಾವುದೇ ವ್ಯಕ್ತಿಗೆ ಯಾವುದೇ ಗ್ರಹದ ದಶೆಯಲ್ಲಿ ಮತ್ತೊಂದು ಗ್ರಹದ ಭುಕ್ತಿ ನಡೆಯುತ್ತಿರುತ್ತದೆ. ಆ ಭುಕ್ತಿನಾಥನಿಂದ ರೋಗವುಂಟಾಗಿದ್ದರೆ ಭುಕ್ತಿನಾಥನಿಗೆ ಸಂಬಂಧಿಸಿದ ರತ್ನವನ್ನು ಆ ಕಾಲದಲ್ಲಿ ಧಾರಣೆ ಮಾಡಬೇಕೇ ಹೊರತು ದಶಾನಾಥನ ಸಂಬಂಧಿಸಿದ ರತ್ನವನ್ನಲ್ಲ. ಇದು ಸಾಮಾನ್ಯವಾಗಿ 6–8 ಅಥವ 12ನೇ ಭಾವಾಧಿಪತಿಯ ಭುಕ್ತಿಗಳು ನಡೆಯುತ್ತಿದ್ದಾಗ ರೋಗವುಂಟಾಗಿದ್ದರೆ ರತ್ನ ಧರಿಸಬೇಕಾದುದು ಅಗತ್ಯ. ಭುಕ್ತಿ ಕಳೆದ ನಂತರ ಅಥವ ರೋಗ ಗುಣಮುಖವಾದ ನಂತರ ಈ ರತ್ನವನ್ನು ಧರಿಸುವ ಅಗತ್ಯವಿಲ್ಲ.

8. ಲಗ್ನಾಧಿಪತಿ ಅಶಕ್ತನಾಗಿ ರೋಗಕ್ಕೆ ಕಾರಣನಾಗಿದ್ದಲ್ಲಿ ಅವನಿಗೆ ಸಂಬಂಧಿಸಿದ ರತ್ನವನ್ನು ಧರಿಸುವುದು ಉತ್ತಮವಾಗಿ ಕಂಡುಬರುತ್ತೆ. ಯಾವುದೇ ರತ್ನದ ತೂಕ ನಾಲ್ಕು ರತ್ತಿಗಳಷ್ಟಿರಬೇಕು.

9. ನೀಚಗ್ರಹದ ಸ್ಥಿತಿಯಿಂದ ರೋಗವುಂಟಾಗಿದ್ದಲ್ಲಿ ಅದಕ್ಕೆ ಸಂಬಂಧಿಸಿದ ರತ್ನವನ್ನು ಆ ಗ್ರಹದ ಭುಕ್ತಿಯ ಕಾಲದಲ್ಲಿ ಧರಿಸಬೇಕು. ಉದಾಹರಣೆಗೆ ಕುಜನು ಕಟಕರಾಶಿಯಲ್ಲಿದ್ದು ನೀಚನಾಗಿ ಶುಭಗ್ರಹಗಳ ಸಂಬಂಧವಿಲ್ಲದಾಗಿದ್ದರೆ ಆ ಸಂದರ್ಭದಲ್ಲಿ ಹವಳವನ್ನು ಧರಿಸಿದರೆ ಮಾಂಸಖಂಡಗಳಿಗೆ ಉಂಟಾಗಿರಬಹುದಾದ ರೋಗ ನಿವಾರಣೆಯಾಗುತ್ತದೆ.

10. ಒಬ್ಬ ವ್ಯಕ್ತಿಗೆ ರೋಗವು ಒಂದು ಗ್ರಹಕ್ಕಿಂತಲೂ ಹೆಚ್ಚಾದ ಗ್ರಹಗಳ ಬಾಧೆಯಿಂದ ಉಂಟಾಗಿದ್ದರೆ ಒಂದೇ ರತ್ನಕ್ಕಿಂತಲೂ ಹಲವು ರತ್ನಗಳನ್ನು ಧರಿಸಲು ಸಲಹೆ ನೀಡಬೇಕು. ಹಾಗೆ ಧರಿಸಲು ಸೂಚಿಸುವ ರತ್ನಗಳು ಒಂದಕ್ಕೊಂದು ವಿರುದ್ಧವಾದ ಫಲಗಳನ್ನುಂಟುಮಾಡದಂತೆ ಎಚ್ಚರಿಕೆಯಿಂದ ಸಲಹೆ ನೀಡಬೇಕು. ಉದಾಹರಣೆಗೆ ಹುಚ್ಚು ಅಥವಾ ಮೆದುಳಿನ ರೋಗಿಗಳಲ್ಲಿ ಬುಧ ಮತ್ತು ಚಂದ್ರರು ಸಾಮಾನ್ಯವಾಗಿ ಜಾತಕಗಳಲ್ಲಿ ದುಷ್ಟಸ್ಥಿತಿಯಲ್ಲಿರುತ್ತಾರೆ. ಈ ಗ್ರಹಗಳು ಭಾವೋದ್ವೇಗ ಮತ್ತು ಬುದ್ಧಿಗೆ ಕಾರಣವಾಗಿವೆ. ಇತರ ಸಂದರ್ಭಗಳಲ್ಲಿ ಬೆಳ್ಳಿಯ ಉಂಗುರದಲ್ಲಿ ಪಚ್ಚೆಯಿಂದ ಬುಧನ ಪ್ರಭಾವ ಉತ್ತಮಗೊಳ್ಳುವುದು. ಬೆಳ್ಳಿಯ

ಲೋಹದಿಂದ ಚಂದ್ರನ ಪ್ರಭಾವ ಉತ್ತಮಗೊಳ್ಳುವುದು. ಅಂದರೆ ಈ ಎರಡು ಗ್ರಹಗಳನ್ನೂ ಬಲಿಷ್ಠರನ್ನಾಗಿ ಮಾಡಿದಂತಾಯ್ತು.

11. ಹೃದಯವನ್ನು ಸೂಚಿಸುವ ಗ್ರಹ ಸೂರ್ಯ. ಸೂರ್ಯನು ಕ್ರೂರ ಸ್ಥಿತಿಯಲ್ಲಿದ್ದು ಹೃದ್ರೋಗವುಂಟಾಗಿದ್ದಲ್ಲಿ ಸೂರ್ಯನ ಸಂಬಂಧಿತ ರತ್ನ (ಮಾಣಿಕ್ಯ) ವನ್ನು ಬಂಗಾರದ ಉಂಗುರದಲ್ಲಿ ಧರಿಸಲು ಸಲಹೆ ಇತ್ತರೆ ಶುಭಫಲ ಕಂಡುಬರುವುದು.

12. ಸ್ತ್ರೀಯರಿಗೆ ಪತಿಕಾರಕ ಗ್ರಹ ಗುರು. ಈ ಗುರುವೇ ವಿವಾಹ ಖಚಿತ ಪಡಿಸುವ ಪುರೋಹಿತನೆಂದೂ ಜ್ಯೋತಿಶ್ಶಾಸ್ತ್ರ ತಿಳಿಸುವುದು. ಎಲ್ಲ ಕನ್ಯೆಯರಿಗೂ ವಿವಾಹಕ್ಕೆ ಈ ಗುರುವಿನ ಬಲವಿಲ್ಲದಾದರೆ ವಿವಾಹಕ್ಕೆ ಅನೇಕ ಅಡ್ಡಿಗಳು. ಇದನ್ನು ನಿವಾರಿಸಿಕೊಳ್ಳಲು ಅಂದರೆ ಸೂಕ್ತ ವಯಸ್ಸಿನಲ್ಲಿ ವಿವಾಹಯೋಗವುಂಟಾಗಲು ಗುರುವಿನ ಶತ್ರುವಾದ "ಪುಷ್ಪರಾಗ"ವನ್ನು ಧರಿಸುವಂತೆ ಸಲಹೆ ನೀಡಿದರೆ ಉಪಯುಕ್ತ.

13. ಶನಿಯು ಆಯುಷ್ಯಕಾರಕ ಗ್ರಹವಾಗಿದ್ದಾನೆ. ಈ ಶನಿಯ ಪ್ರಭಾವ ಆಯುಷ್ಯ ಸ್ಥಾನಗಳಾದ 1-3-8ಕ್ಕೆ ಸಂಬಂಧಿಸಿದ್ದು, ಶನಿಯು ಬಲಹೀನನಾಗಿರುವ ಜಾತಕಗಳಲ್ಲಿ ಆಯುಷ್ಯ ಕ್ಷೀಣತೆಯುಂಟಾಗುತ್ತೆ. ಇದನ್ನು ನಿವಾರಿಸಿಕೊಳ್ಳಲು ಶನಿಯ ಲೋಹವಾದ ಕಬ್ಬಿಣದ ಉಂಗುರವನ್ನು ಧರಿಸುವುದರಿಂದ ಶನಿಯ ಪ್ರಾಬಲ್ಯ ಹೆಚ್ಚಿ ಆಯುಷ್ಯ ವೃದ್ಧಿಯಾಗುವುದು.

14. ಯಾವುದೇ ವ್ಯಕ್ತಿಗೆ ಒಂದು ನೈಸರ್ಗಿಕ ಪಾಪಿಗ್ರಹದ ದೆಶೆಯು ನಡೆಯುತ್ತಿದ್ದು, ಆ ಗ್ರಹವು ತನ್ನ ಸ್ಥಿತಿ ಅಥವ ಅನ್ಯದೃಷ್ಟಿಯಿಂದ ಪಾಪ ಫಲಗಳನ್ನು ಉಂಟುಮಾಡುತ್ತಿದ್ದಲ್ಲಿ ಆ ಪಾಪಿಗ್ರಹ ಸಂಬಂಧಿಸಿದ ರತ್ನವನ್ನು ಧರಿಸಲು ಸಲಹೆ ಕೊಡಬಾರದು. ಕಾರಣವೇನೆಂದರೆ ಆ ಗ್ರಹದ ರತ್ನ ಧರಿಸಿದರೆ ಇನ್ನೂ ಹೆಚ್ಚು ಪ್ರಭಾವಯುತವಾಗಿ ದುಷ್ಫಲಗಳ ವೈಪರೀತ್ಯಕ್ಕೆ ಕಾರಣವಾದೀತು. ಇಂತಹ ಸಂದರ್ಭಗಳಲ್ಲಿ ಜ್ಯೋತಿಶ್ಶಾಸ್ತ್ರ ರೀತ್ಯ ಮತ್ತು ಮಂತ್ರಶಾಸ್ತ್ರರೀತ್ಯ ಗ್ರಹದ ಜಪಪೂಜೆ ಮತ್ತು ದಾನಗಳನ್ನು ಮಾಡುವಂತೆ ಸೂಚಿಸಬೇಕು. ರತ್ನವನ್ನು ಧರಿಸಲು ಸಲಹೆ ನೀಡಬಾರದು.

15. ಸೂರ್ಯನು ಒಬ್ಬರ ಜಾತಕದಲ್ಲಿ ಲಾಭ ಭಾವದಲ್ಲಿರುವನೆಂದು ಭಾವಿಸೋಣ ಮತ್ತು ಈ ಸೂರ್ಯನದೇ ಭುಕ್ತಿಯೂ ನಡೆಯುವುದೆಂದು ಊಹಿಸೋಣ. ಇದರಿಂದ ಗರ್ಭೋತ್ಪತ್ತಿಗೆ ಅಥವ ಸಂತಾನಕ್ಕೆ ಅಡಚಣೆಯಾಗಿರಲು ಸಾಧ್ಯ. ಕಾರಣವೇನೆಂದರೆ ಸೂರ್ಯನು ಲಾಭಭಾವದಿಂದ ಸಂತಾನಭಾವ (5ನೇ ಮನೆ)ಯನ್ನು ದೃಷ್ಟಿಸುವನು. ಇಂತಹ ಸಂದರ್ಭದಲ್ಲಿ ಈ ಸೂರ್ಯನ ಸಂಬಂಧಿತ ರತ್ನವಾದ ಮಾಣಿಕ್ಯ ಧರಿಸಲು ಸಲಹೆ ಕೊಡುವುದು ಸರಿಯಿಲ್ಲ. ಇದರಿಂದ

ಸೂರ್ಯನ ಪ್ರಭಾವ ಹೆಚ್ಚಿ ಪಂಚಮ ಭಾವಕ್ಕೆ ಅಂದರೆ ಸಂತಾನಕ್ಕೆ ಅಡ್ಡಿ ಉಂಟಾದೀತು. ಇಂತಹ ಸಂದರ್ಭದಲ್ಲಿ ಸೂರ್ಯನಿಗೆ ಸಂಬಂಧಿಸಿದ ಮಂತ್ರ, ಪೂಜೆ, ವಸ್ತು, ಧಾನ್ಯಗಳ ದಾನವೇ ಉತ್ತಮ ಫಲ ನೀಡುತ್ತದೆ. ಈ ಸಂದರ್ಭದಲ್ಲಿ ಪಂಚಮ ಭಾವಕ್ಕೆ ಸಂಬಂಧಿಸಿದ ಗ್ರಹದ ರತ್ನವನ್ನು ಧರಿಸಲು ಸಲಹೆ ನೀಡಬೇಕು. ಇದರಿಂದ ಸಂತಾನ ವೃದ್ಧಿಯಾಗುತ್ತೆ. ಇದರಿಂದ ನಾವು ತಿಳಿಯಬೇಕಾದ ಅಂಶವೇನೆಂದರೆ ಒಂದು ಅಗತ್ಯವಾದ ಗ್ರಹದ ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳಲು ಅದರ ಸಂಬಂಧಿತವಾದ ರತ್ನ ಧರಿಸಲು ಸೂಚಿಸಬೇಕಾದುದು ಮತ್ತು ಅದಕ್ಕೆ ವಿರುದ್ಧವಾಗಿರುವ ಗ್ರಹದ ಪೂಜೆಯನ್ನು, ಜಪ, ದಾನಗಳನ್ನು ಸೂಚಿಸಬೇಕಾದುದು ಅಗತ್ಯ.

## ಪಂ॥ ಗೋಪೇಶ್‌ಕುಮಾರ್ ಓಝಾರವರು ರತ್ನ ಧರಿಸಲು ಇತ್ತಿರುವ ಸಲಹೆ

ದೆಹಲಿಯ ಖ್ಯಾತ ಜ್ಯೋತಿಷಿ ಪ॥ ಗೋಪೇಶ್‌ಕುಮಾರ್ ಓಝಾರವರು ತಮ್ಮ ಗ್ರಂಥ "ಪ್ರಿಡಿಕ್ಟಿವ್ ಓಂದು ಅಸ್ಟ್ರಾಲಜಿ" ಎಂಬುದರಲ್ಲಿ ರತ್ನ ಧರಿಸುವುದರ ಬಗ್ಗೆ ಈ ರೀತಿ ಸಲಹೆ ನೀಡಿದ್ದಾರೆ. ಯಾವುದೇ ವ್ಯಕ್ತಿ ಒಂದು ಗ್ರಹದ ಅಶುಭ ಪ್ರಭಾವವುಳ್ಳವನಾದಲ್ಲಿ ಆ ಗ್ರಹಕ್ಕೆ ಸಂಬಂಧಿಸಿದ ರತ್ನವನ್ನು ಧರಿಸಬೇಕು. ಇದರಿಂದ ಅಶುಭ ಫಲಗಳು ನಿವಾರಣೆಯಾಗುವುದು. ಸಾಮಾನ್ಯವಾಗಿ ಒಂದು ರತ್ನ ಧರಿಸುವ ಮುನ್ನ ಆ ರತ್ನವನ್ನು ಒಂದು ರೇಷ್ಮೆ ಪಟ್ಟಿಯಲ್ಲಿ ಅದನ್ನು ಬಿಗಿದು ರೆಟ್ಟೆಗೆ ಕಟ್ಟಿಕೊಂಡು ಮೂರು ದಿವಸಗಳ ಪರೀಕ್ಷೆ ಮಾಡಬೇಕು. ಆ ರೇಷ್ಮೆ ಪಟ್ಟಿಯ ವರ್ಣವೂ ರತ್ನದ ವರ್ಣವೇ ಆಗಿರಬೇಕು. ಆ ಮೂರು ದಿನಗಳಲ್ಲಿ ಶುಭ ಫಲಗಳು ಕಂಡುಬಂದರೆ ಒಂದು ಉಂಗುರದಲ್ಲಿ ಅಥವ ತಾಯಿತದಲ್ಲಿ (ಯಂತ್ರದಲ್ಲಿ) ಖಚಿತಪಡಿಸಿ ಧರಿಸುವಾಗ ರತ್ನದ ತಳಭಾಗ ಚರ್ಮಕ್ಕೆ ಸ್ಪರ್ಶವಾಗಲು ರಂಧ್ರ ಹಿಂಭಾಗದಲ್ಲಿ ಮೂಡಿಸಬೇಕು. ರತ್ನದ ಹೊಳಪಿನ ಹೊರಭಾಗದ ಮೇಲೆ ಸೂರ್ಯ ಕಿರಣಗಳು ಬೀಳುವಂತಿರಬೇಕು. ಆಗ ಉತ್ತಮ ಫಲಗಳು ಕಾಣಬಹುವುವು. ಆ ಪರೀಕ್ಷಾ ಕಾಲದ ಮೂರು ದಿನಗಳಲ್ಲಿ ಅಶುಭ ಫಲ ಮನಗಂಡರೆ ಆ ರತ್ನವನ್ನು ತೆಗೆದುಹಾಕಬೇಕು.

## ಗಮನಿಸಬೇಕಾದ ಮುಖ್ಯ ವಿಚಾರಗಳು

1. ರತ್ನಗಳ ಬೆಲೆ ನಿರ್ಧರಿಸಲು ಮುಖ್ಯ ಅಂಶಗಳು ಮೂರು. ತೂಕ, ಹೊಳಪು, ಬಣ್ಣದ ಸ್ಥಿತಿ. ಈ ಮೂರು ಅಂಶಗಳ ಜೊತೆಗೆ ಅದರ ಪರಿಶುದ್ಧತೆಯೂ ಅತಿ ಮುಖ್ಯ. ಪರಿಶುದ್ಧವಾದ, ಪಾರದರ್ಶಕವುಳ್ಳ, ಆಕರ್ಷಕ ಆಕಾರ, ಅತ್ಯಂತ ಪರಿಶುದ್ಧವಾದ ಹಸುರು ಬಣ್ಣದ ಪಚ್ಚೆ ಸಿಗುವುದು ದುರ್ಲಭ. ಹಾಗೆ ದೊರೆತರೆ ಅದರ ಬೆಲೆಯು ವಜ್ರದ ಬೆಲೆಗೆ ಸರಿಸಮವಾಗುವುದು. ಇದೇ ರೀತಿಯಲ್ಲಿ ಶುದ್ಧ ಮಾಣಿಕ್ಯ, ಶುದ್ಧ ಮುತ್ತು, ಶುದ್ಧ ಗೋಮೇಧಿಕಾ, ಶುದ್ಧ ವೈಢೂರ್ಯ, ಶುದ್ಧ ಪುಷ್ಪರಾಗ, ಶುದ್ಧವಾದ ಇಂದ್ರನೀಲ ಇವುಗಳು ನೈಸರ್ಗಿಕವಾಗಿ ದೊರಕುವುದು

ವಿರಳ. ಪಾರದರ್ಶಕ ಸರಿಯಿರದೇ ಹೋಗಬಹುದು. ಆಕರ್ಷಿತ ಆಕೃತಿ ಹೊಂದದೆ ಇರಬಹುದು. ಪ್ರಕಾಶವಾನವುಳ್ಳದೇ ಇರಬಹುದು. ಆಗ ರತ್ನದ ಈ ಗುಣಮಟ್ಟಗಳು ಇಳಿದಂತೆ ಅವುಗಳ ಬೆಲೆಯೂ ಇಳಿಯುವುದು.

2. ರತ್ನ ಗುಳಿಗೆಗಳನ್ನು ತಯಾರಿಸಲು ಒಮ್ಮೆ ರತ್ನಗಳನ್ನು ಕೊಂಡುಕೊಂಡಲ್ಲಿ ಅದನ್ನೇ ಅನಿರ್ದಿಷ್ಟ ಕಾಲದವರೆಗೆ ಬಳಸಲು ಸಾಧ್ಯ. ಅತ್ಯಂತ ಪ್ರಕಾಶಿತ ರತ್ನವನ್ನೇ ಈ ಔಷಧಿಗಳ ತಯಾರಿಕೆಯಲ್ಲಿ ಉಪಯೋಗಿಸಬೇಕೆಂದಿಲ್ಲ. ಆಕಾರದ ಪ್ರಾಮುಖ್ಯತೆಯೂ ಅಗತ್ಯವಿಲ್ಲ.

3. ರತ್ನಗಳನ್ನು ಭಾರತೀಯ ತೂಕಮಾಪನ ಪ್ರಕಾರ "ರತಿ" ರೂಪದಲ್ಲಿ ಮಾರಾಟವಾಗುವುದು. ಇದು ಹಿಂದಿನಿಂದಲೂ ಅನುಸರಿಸಿರುವ ಮಾಪನ. ಆದರೆ ಇಂದು ಪಾಶ್ಚಾತ್ಯ ದೇಶಗಳಲ್ಲಿರುವಂತೆಯೇ "ಕ್ಯಾರೆಟ್" ತೂಕದಲ್ಲಿ ಮಾರಾಟ ವಾಗುತ್ತಲಿದೆ.

$$1 \text{ ರತ್ತಿ} = \frac{1}{64}\text{ನೇ ತೊಲ ಅಥವ } 181 \text{ ಮಿಲಿಗ್ರಾಂ.}$$

ಆದರೆ ಇಂದು ಆಭರಣ ವ್ಯಾಪಾರಿಗಳು ಹಾಗೂ ಅಕ್ಕಸಾಲಿಗರು ಅನುಸರಿಸುತ್ತಿರುವ ಕ್ರಮ ಹೀಗಿದೆ.

1 ರತ್ತಿಗೆ = 120 ಮಿಲಿಗ್ರಾಂಗಳು.

ಆಧುನಿಕ ರೀತ್ಯ 1 ಕ್ಯಾರೆಟ್‌ಗೆ = 200 ಮಿಲಿಗ್ರಾಂಗಳು.

ಅಂದರೆ 1 ಕ್ಯಾರೆಟ್‌ಗೆ (ನಮ್ಮ ದೇಶದ ಹಳೆಯ ತೂಕದ ರೀತ್ಯ) 1 ರತ್ತಿ ಗಿಂತಲೂ ಕೇವಲ 19 ಮಿಲಿಗ್ರಾಂ ಹೆಚ್ಚು ಇರುವುದಾಗಿ ತಿಳಿದುಬರುತ್ತೆ.

4. ಯಾವ ರತ್ನ ಎಷ್ಟು ತೂಕವುಳ್ಳದ್ದನ್ನು ಧರಿಸಿಬೇಕೆಂಬ ಬಗ್ಗೆ ಸರಿಯಾದ ಸಲಹೆ ಯಾವ ಆರ್ಷೇಯ ಗ್ರಂಥಗಳಲ್ಲೂ ಕಾಣದು. ಅನುಭವ ದೃಷ್ಟಿಯಿಂದ ಗ್ರಹಗಳಿಗೆ ಸಂಖ್ಯಾಶಾಸ್ತ್ರರೀತ್ಯ ಸಂಬಂಧಿಸಿದ ಸಂಖ್ಯಾ ಆಧಾರದ ಮೇಲೆ ರತ್ನಗಳನ್ನು ಧರಿಸಲು ತಿಳಿಸಿರುವರು.

| ಗ್ರಹ | ಸಂಖ್ಯಾಶಾಸ್ತ್ರ ರೀತ್ಯ ಅದರ ಸಂಖ್ಯೆ | ಧರಿಸಬೇಕಾದ ರತ್ನದ ತೂಕ ರತ್ತಿ ಅಥವ ಕ್ಯಾರೆಟ್ ತೂಕದಲ್ಲಿ |
|---|---|---|
| ರವಿ | 1 | 1 |
| ಚಂದ್ರ | 2 | 2 |
| ಕುಜ | 9 | 9 |
| ಬುಧ | 5 | 5 |
| ಗುರು | 3 | 3 |
| ಶುಕ್ರ | 6 | 6 |
| ಶನಿ | 8 | 8 |
| ರಾಹು | 4 | 4 |
| ಕೇತು | 7 | 7 |

ಇದನ್ನೇ ಆಧಾರವಾಗಿಟ್ಟುಕೊಳ್ಳಬೇಕೆಂದು ಎಲ್ಲೂ ತಿಳಿಸಿಲ್ಲ. ನವರತ್ನದ ಉಂಗುರಕ್ಕೆ 9 ರತ್ನಗಳನ್ನು ಬಳಸುವಾಗ ಪ್ರತಿ ರತ್ನದ ಗಾತ್ರ ಒಂದೇ ಸಮನೆ ಇರಬೇಕೆಂದು ತಿಳಿದುಬರುವುದು. ಇಲ್ಲಿ ತೂಕದ ಪ್ರಶ್ನೆಯೇ ಇಲ್ಲ.

## ನಮ್ಮ ಅನುಭವಸಿದ್ಧ ರತ್ನ ಸಲಹೆ

1. ಯಾವುದೇ ರತ್ನವನ್ನು ಒಂದು ಕ್ಯಾರೆಟ್ ತೂಕವೇ ಹಾಕಬೇಕೆಂದಿಲ್ಲ. ಸಂಖ್ಯಾಶಾಸ್ತ್ರ ರೀತ್ಯ ಹಲವು ರತ್ತಿ ಅಥವ ಹಲವು ಕ್ಯಾರೆಟ್ ತೂಕದಲ್ಲಿ ರತ್ನ ಧರಿಸಲು ವಿಪರೀತ ಬೆಲೆಯಾಗುವುದರಿಂದ ಅಷ್ಟೇ ಧರಿಸಲು ಎಲ್ಲರಿಗೂ ಸಾಧ್ಯವಾಗದು.

2. ಯಾವುದೇ ರತ್ನವನ್ನು ಈ ರೀತಿ ಬಳಸಬಹುದು.

| | | |
|---|---|---|
| ಮಾಣಿಕ್ಯ | — | 1 ಕ್ಯಾರೆಟ್ |
| ಹವಳ | — | 1.3 ಅಥವ 9 ಕ್ಯಾರೆಟ್ |
| ಮುತ್ತು | — | 1 ಅಥವ 2 ಕ್ಯಾರೆಟ್ |
| ಪಚ್ಚೆ | — | 1, 2 ಅಥವ 5 ಕ್ಯಾರೆಟ್ |
| ಪುಷ್ಪರಾಗ | — | 1, 1.5 ಅಥವ 3 ಕ್ಯಾರೆಟ್ |
| ವಜ್ರ | — | 15 ಮಿಲಿಗ್ರಾಂನಿಂದ ಅಗತ್ಯವೆನಿಸಿದಷ್ಟು |
| ನೀಲ | — | 1 ಕ್ಯಾರೆಟ್ |
| ಗೋಮೇಧಿಕಾ | — | 1 ಅಥವ 4 ಕ್ಯಾರೆಟ್ |
| ವೈಢೂರ್ಯ | — | 1 ಅಥವ 2 ಕ್ಯಾರೆಟ್ |

ಯಾವುದೇ ಒಂದು ರತ್ನ ಬಳಸಲು ಈ ಪಟ್ಟಿ ಉಪಯೋಗ. ನಾನಾ ರತ್ನಗಳನ್ನು ಧರಿಸುವುದಾದರೆ ಎಲ್ಲ ರತ್ನಗಳ ತೂಕ ಸಮನಾಗಿರಬೇಕು.

### "ರತ್ನ" ಪದದ ಪ್ರಯೋಗಾರ್ಥ

ರತ್ನ — (ನಾಮಪದ), (1) ವಜ್ರ, ಮುತ್ತು, ಮಾಣಿಕ್ಯ ಮುಂತಾದ ಬೆಲೆಯುಳ್ಳ ಮಣಿ, (2) ಅತ್ಯುತ್ತಮವಾದುದು ; ಶ್ರೇಷ್ಠವಾದದ್ದು.

ರತ್ನಾರ್ಚಿ — ರತ್ನದ ಬೆಳಕು ; ರತ್ನದ ಕಾಂತಿ.

ರತ್ನಾಕರ — ರತ್ನಗಳ ಆಶ್ರಯ ಸ್ಥಾನ ; ಸಮುದ್ರ, ಗಣಿ ಮುಂತಾದವು.

ರತ್ನ ಆತಪ — ರತ್ನಾರ್ಚಿ ; ರತ್ನದ ಬೆಳಕು, ರತ್ನದ ಕಾಂತಿ

ರತ್ನಕಂಬಲ — ರತ್ನಗಂಬಳಿ ; ರತ್ನಗಂಬಲಿ

ರತ್ನಗಂಬಲಿ — ಸೊಗಸಾಗಿ ಚಿತ್ರಗಳನ್ನು ನೆಯ್ದಿರುವ ಬೆಲೆಬಾಳುವ ಕಂಬಳಿ

ರತ್ನಕನ್ನಡಿ — ರತ್ನದಿಂದ ಮಾಡಿದ ಕನ್ನಡಿ ; ಮುಕುರ

ರತ್ನಖಚಿತ — ಬೆಲೆಯುಳ್ಳ ಮಣಿಗಳಿಂದ ಕುಂದಣಿಸಿದ

ರತ್ನಗರ್ಭ — ರತ್ನಗಳನ್ನು ಹೊಂದಿರುವುದು ; ಭೂಮಿ, ಸಮುದ್ರ ಇತ್ಯಾದಿ ಕುಬೇರ

ರತ್ನತ್ರಯ — (1) ಸಮ್ಯಗ್ ದರ್ಶನ, ಸಮ್ಯಗ್ಜ್ಞಾನ, ಸಮ್ಯಗ್ಚಾರಿತ್ರ ಎಂಬ ಮೂರು ತತ್ವಗಳು
(2) ಪಂಪ, ಪೊನ್ನ, ರನ್ನರೆಂಬ ಕನ್ನಡಭಾಷೆಯ ಮೂವರು ಶ್ರೇಷ್ಠ ಕವಿಗಳು

ರತ್ನಪಡಿ — ರತ್ನಖಚಿತವಾದ ವಸ್ತು

ರತ್ನಸಂಬಳಿಗೆ — ರತ್ನದಿಂದ ಮಾಡಿದ ಭರಣಿ

### "ಅಷ್ಟಾಂಗ ಹೃದಯ" ಆಯುರ್ವೇದ ಗ್ರಂಥದಲ್ಲಿ ರತ್ನದ ಗುಣ ಪ್ರಸ್ತಾಪ

**ಶ್ಲೋಕ** ॥ ಅಭ್ಯಾಸಾತ್ ಪ್ರಾಪ್ಯತೆ ದೃಷ್ಟಿಃ ಕರ್ಮಸಿದ್ಧಿ ಪ್ರಕಾಶಿನೀ ।
ರತ್ನಾದಿ ಸದಸಜ್ಞಾನಂ ನಶಾಸ್ತ್ರದೇವ ಜಾಯತೇ ॥

**ಅರ್ಥ** : ಅಭ್ಯಾಸಮಾಡುವ ಪ್ರವೃತ್ತಿಯಿಂದಲೇ ಕಾರ್ಯಸಿದ್ಧಿಯನ್ನು ಕೊಡುವ ದಿವ್ಯವಾದ ಜ್ಞಾನದೃಷ್ಟಿಯು ಪ್ರಾಪ್ತವಾಗುತ್ತದೆ. ಕೇವಲ ಶಾಸ್ತ್ರ ಗ್ರಂಥಗಳ ಓದುವಿಕೆಯಿಂದಲೇ ರತ್ನಗಳ ಗುಣಾವಗುಣಗಳನ್ನು ತಿಳಿಯಲು ಸಾಧ್ಯವಾಗದು. ಇದಕ್ಕೆ ಅಭ್ಯಾಸಾನುಪೂರ್ವಕ ಅನುಭವವೇ ಅಗತ್ಯವಿದೆ.

——

ನಿರ್ದೇಶಕರು :

## ಕೆ. ನಾಗರಾಜರಾವ್ ಮತ್ತು ಎನ್. ಕೀರ್ತಿರಾಜ್

## ರಾಜ್ಸ್ ಅಸ್ಟ್ರೋ ರಿಸರ್ಚ್ ಸೆಂಟರ್

200, ಮಾರ್ಕೆಟ್ ರಸ್ತೆ, (ವಿ.ಬಿ. ಬೇಕರಿ ಸಮೀಪ), ವಿಶ್ವೇಶ್ವರಪುರಂ
ಬೆಂಗಳೂರು–560 004

ಪ್ರತಿದಿನ ಬೆಳಿಗ್ಗೆ . 10 ರಿಂದ 1 ಘಂಟೆ
ಸಂಜೆ : 4 ರಿಂದ 8 ಘಂಟೆ

1083, 27ನೇ ಮೈನ್
9ನೇ ಬ್ಲಾಕ್, ಜಯನಗರ
ಬೆಂಗಳೂರು–560 069

ಸಂಜೆ : 3 ರಿಂದ 8 ಘಂಟೆ

ದೂರವಾಣಿ : **645489**

**ಜ್ಯೋತಿಶ್ಶಾಸ್ತ್ರ, ಸಾಮುದ್ರಿಕೆ, ಸಂಖ್ಯಾಶಾಸ್ತ್ರ – ಸಲಹೆ ಸಂಶೋಧನೆಗಾಗಿ ಮೀಸಲಾದ ಭಾರತದಲ್ಲಿ ಪ್ರಖ್ಯಾತವಾದ ಕೇಂದ್ರ, ಇಲ್ಲಿ........**

- ವಿಶಿಷ್ಟರೀತ್ಯ ದೃಗ್ಗಣಿತ ಆಧಾರದ ಮೇಲೆ ಜಾತಕಗಳನ್ನು ಹಾಗೂ ಕನ್ನಡ ಇಂಗ್ಲೀಷ್‌ನಲ್ಲಿ ಬರೆದುಕೊಡಲಾಗುವುದು.
- ಕೈ ರೇಖೆಗಳಿಂದ ಜೀವನದ ಆಗು-ಹೋಗುಗಳನ್ನು ತಿಳಿಸಲಾಗುವುದು.
- ಜಾತಕದ ಫಲಾಫಲಗಳನ್ನು ತಿಳಿಸಲಾಗುವುದು.
- ಸಂಖ್ಯಾಶಾಸ್ತ್ರ ಆಧಾರದಿಂದಲೂ ಭವಿಷ್ಯ ನೀಡಲಾಗುವುದು,
- ವಧೂ–ವರರ ಜಾತಕಗಳನ್ನು ವಿವಾಹಕ್ಕೆ ಹೋಲಿಕೆ ನೋಡಲಾಗುವುದು.
- ಪ್ರಶ್ನೆಶಾಸ್ತ್ರ ಆಧಾರದಿಂದಲೂ ನಿಮ್ಮ ಜೀವನದ ಪ್ರಮುಖ ಸಂಗತಿಗಳನ್ನು ತಿಳಿಸಲಾಗುತ್ತೆ.
- ಗ್ರಹಗಳ ದೋಷ, ಕಂಟಕಾದಿಗಳಿಗೆ ಸೂಕ್ತ ಶಾಂತಿ ಕ್ರಮಗಳನ್ನು ಸೂಚಿಸಲಾಗುವುದು.
- ಗೃಹಪ್ರವೇಶ, ವಿವಾಹ, ಉಪನಯನ, ನೂತನ ವ್ಯಾಪಾರ ಸ್ಥಾಪನೆಗೆ ಶುಭಮುಹೂರ್ತ ನಿಶ್ಚಯಿಸಿಕೊಡಲಾಗುವುದು.
- ವ್ಯಾಪಾರ ವೃದ್ಧಿಗೆ, ಗ್ರಹದೋಷ ನಿವಾರಣೆಗೆ ಕಾರ್ಯಸಿದ್ಧಿಗೆ ಲಕ್ಷ್ಮೀ ಯಂತ್ರ, ಸುದರ್ಶನ ಯಂತ್ರ, ಕಾರ್ಯಸಿದ್ಧಿ ಯಂತ್ರ, ಮತ್ಸ್ಯಯಂತ್ರ ಇತ್ಯಾದಿ ಯಂತ್ರಗಳನ್ನು ಪೂಜಿಸಿ ಕೊಡಲಾಗುವುದು.